CPMG / KA / BG-GPO/13/2003-2005




# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೮ | ಬೆಂಗಳೂರು, ಗುರುವಾರ, ಡಿಸೆಂಬರ್ ೪, ೨೦೦೩ (ಮಾರ್ಗಶಿರ ೧೩, ಶಕ ವರ್ಷ ೧೯೨೫) | ಸಂಚಿಕೆ ೪೮ |
|---|---|---|


## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ**

**ಮಿನಿ ವಿಧಾನಸೌಧ ರೋಡ್, ಹಾನಗಲ್ಲ ತಾಲ್ಲೂಕ್, ಹಾವೇರಿ ಜಿಲ್ಲೆ**

**ಸಂಖ್ಯೆ: ತಾಸಕಅ:ಸಿಬ್ಬಂದಿ:ಸಿಆರ್:960:2003-04, ದಿನಾಂಕ: 30ನೇ ಸೆಪ್ಟೆಂಬರ್ 2003**

**ವಿಷಯ:** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ-56 ಯೋಮಸ-02 (1) ದಿನಾಂಕ: 18.7.2002.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ, 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಿಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ತಾಲ್ಲೂಕು ಮಟ್ಟದ ಹಂತದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| ತಾಲ್ಲೂಕು ಮಟ್ಟದಲ್ಲಿ | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|
| | ಕಛೇರಿ ಅಧೀಕ್ಷಕರು | ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1. ಇಲಾಖೆಯ ಸಂಘಟನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯು ತಾಲ್ಲೂಕು ಪಂಚಾಯತ್‌ನ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಸದರಿ ಕಛೇರಿಯಲ್ಲಿ ಈ ಕೆಳಗಿನಂತೆ ಪೂರಕ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

| | | |
|---|---|---|
| 1 | ಕಛೇರಿ ಅಧೀಕ್ಷಕರು | 1 ಹುದ್ದೆ |
| 2 | ಪ್ರಥಮ ದರ್ಜೆ ಸಹಾಯಕರು | 1 ಹುದ್ದೆ |
| 3 | ದ್ವಿತೀಯ ದರ್ಜೆ ಸಹಾಯಕರು | 1 ಹುದ್ದೆ |
| 4 | ಬೆರಳಚ್ಚುಗಾರರು | 1 ಹುದ್ದೆ |
| 5 | ಗ್ರೂಪ್ "ಡಿ" ನೌಕರರು | 1 ಹುದ್ದೆ |

**ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಹಾನಗಲ್ಲ ಇವರ ಅಧೀನದಡಿಯಲ್ಲಿ ಬರುವ ಸಂಸ್ಥೆಗಳ ಹೆಸರು ಮತ್ತು ವಿವರಗಳು:**

1. ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಹಾನಗಲ್ಲ
2. ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯ, ಹಾನಗಲ್ಲ
3. ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಶ್ಯಾಡಗುಪ್ಪಿ
4. ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಬೆಳಗಾಲಪೇಟ
5. ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ
6. ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ನರೇಗಲ್ಲ
7. ಸರ್ಕಾರಿ ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿ ನಿಲಯ, ಹಾನಗಲ್ಲ
8. ಸರ್ಕಾರಿ ಮೆಟ್ರಿಕ್ ನಂತರದ ಪರಿಶಿಷ್ಟ ವರ್ಗದ ಬಾಲಕರ ವಿದ್ಯಾರ್ಥಿನಿಲಯ, ಚಿಕ್ಕಾಂಶಿ-ಹೊಸೂರು
9. ಸರಕಾರಿ ಆಶ್ರಮ ಶಾಲೆ, ಹಾನಗಲ್ಲ
10. ಮಹಿಳಾ ಕಲ್ಯಾಣ ಕೇಂದ್ರ, ಹಾನಗಲ್ಲ
11. ಶ್ರೀ ಮೊರಾರ್ಜಿ ದೇಸಾಯಿ ಮಾದರಿ ವಸತಿ ಶಾಲೆ, ಹಳ್ಳಿಬೈಲ್

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ತಾಲ್ಲೂಕು ಮಟ್ಟದಲ್ಲಿ ಪ.ಜಾತಿ : ಪ.ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1. ಕಾನೂನು ಪದವೀಧರರಿಗೆ ಧನ ಸಹಾಯ
2. ನರ್ಸರಿ ಮತ್ತು ಮಹಿಳಾ ಕಲ್ಯಾಣ ಕೇಂದ್ರಗಳು
3. ಕಟ್ಟಡಗಳ ನಿರ್ವಹಣೆ
4. ರಾಜ್ಯ ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಶಿಷ್ಯವೇತನ
5. ಎಸ್.ಎಸ್.ಎಲ್.ಸಿ. ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ
6. ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ
7. ಪ್ರತಿಭಾ ವಿದ್ಯಾರ್ಥಿವೇತನ
8. ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು
9. ಕಾಲೇಜು ಹಾಸ್ಟಲ್ ವಿದ್ಯಾರ್ಥಿಗಳಿಗೆ ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಸಹಾಯ
10. 8 ರಿಂದ 10ನೇ ತರಗತಿ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಬಾಲಕಿಯರಿಗೆ ವಿಶೇಷ ಪ್ರೋತ್ಸಾಹ ಶಿಷ್ಯವೇತನ
11. ಪ.ವರ್ಗದ ಹಾಗೂ ಪ.ಜಾತಿ ವಿದ್ಯಾರ್ಥಿಗಳಿಗೆ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ
12. ಅನೈರ್ಮಲ್ಯ ವೃತ್ತಿಗಳಲ್ಲಿ ತೊಡಗಿರುವ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ
13. 1 ರಿಂದ 5ನೇ ತರಗತಿಯ ವಿದ್ಯಾರ್ಥಿಗಳಿಗೆ (ಪ.ಜಾತಿ:ಪ.ವರ್ಗ) ವಿದ್ಯಾರ್ಥಿ ವೇತನ.
14. ಅಸ್ಪೃಶ್ಯತಾ ನಿವಾರಣಾ ಕಾರ್ಯಕ್ರಮಗಳ ಅನುಷ್ಟಾನ
15. ದೌರ್ಜನ್ಯಕ್ಕೆ ಒಳಪಟ್ಟ ಪ.ಜಾತಿಯವರಿಗೆ ಪರಿಹಾರ
16. ಜಾತಿ ಪರಿಶೀಲನೆ
17. ಅಂತರ ಜಾತಿ ವಿವಾಹವಾದ ದಂಪತಿಗಳಿಗೆ ಪ್ರೋತ್ಸಾಹ ಧನ
18. ವಿಶೇಷ ಘಟಕ ಯೋಜನೆ ಕಾರ್ಯಕ್ರಮಗಳ ಅನುಷ್ಠಾನ
19. ಗಿರಿಜನ ಉಪಯೋಜನೆ ಕಾರ್ಯಕ್ರಮಗಳ ಅನುಷ್ಠಾನ

**2. ಅಧಿಕಾರಿಗಳು ಮತ್ತು ನೌಕರರ ಅಧಿಕಾರಿಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ:-**

ಮೇಲೆ ವಿವರಿಸಿರುವಂತೆ ಶೀರ್ಷಿಕೆ (1) ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ಎಲ್ಲಾ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಹಣಾ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು:-**

**ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು:-** ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ನಿರ್ವಹಿಸುವ ಪ್ರತಿಯೊಂದು ಕರ್ತವ್ಯಗಳ ಬಗ್ಗೆ ಜಾಬ್ ಚಾರ್ಟ್‌ನ ಪ್ರತಿ ಲಗತ್ತಿಸಿದೆ.

**3. ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:-**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ಆಯಾ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯನಿರ್ವಹಿಸುವರು. ಸಾರ್ವಜನಿಕರಿಂದ ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರುಸಹಿ ಮಾಡಿಸಿದ ನಂತರ ಸದರಿ ಪತ್ರಗಳನ್ನು ನೋಂದಾಯಿಸಿ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

3. **ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:**

1. ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2. ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.
3. ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯನಿರ್ವಾಹಕರ ಮೇಜು ತಪಾಸಣೆ ಕಾರ್ಯ.
4. ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.
5. ಸರ್ಕಾರವು : ಮೇಲಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಪಾಲಿಸುವುದು.
6. ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

4. **ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:-**

1. ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು, ಆದೇಶಗಳು ವಾರ್ಷಿಕ ಸಂಕಲನ ಕ್ರಿಯಾ ಯೋಜನೆ ಹಾಗೂ ಕಿರುಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.
2. ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ, ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸಿರುವುದು.
3. ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ರೀತ್ಯಾ ರಾಜ್ಯ ಮಟ್ಟದಲ್ಲಿ, ಜಂಟಿ ನಿರ್ದೇಶಕರು (ವಿ.ಘ.ಯೋ) ಯವರನ್ನು ಸಕ್ಷಮ ಪ್ರಾಧಿಕಾರವಾಗಿ ಹಾಗೂ ಸಮಾಜ ಕಲ್ಯಾಣ ಆಯುಕ್ತರವರನ್ನು ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳನ್ನು ಸಕ್ಷಮ ಪ್ರಾಧಿಕಾರವನ್ನಾಗಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್‌ರವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿಯೂ ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.
4. ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂತಹ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು,
ಹಾನಗಲ್ಲ ತಾಲ್ಲೂಕು, ಹಾವೇರಿ ಜಿಲ್ಲೆ.

## ANNEXURE - I
## JOB CHART FOR TALUK WELFARE OFFICERS

**Basic Functions:**

1. To work as Liason and implementing / Executive officers for the welfare of Sch.Castes/Sch. Tribes in the Taluk.
2. To tour not less than 15 days with 10 night halts and they must specifically visit Harijan Basthis.
3. To prepare detailed annual Action plan of various programmes for the welfare of Sch. Castes/Sch. Tribes in the Taluk and submit to the Deputy Commissioner and District Social Welfare Officer of the Districts for sanction of grants.
4. To supervise the work of Heads of Social Welfare institutions in the Taluk including table inspection of office staff.
5. To send monthly, quarterly, half yearly and annual progress reports.
6. To send monthly expenditure statements and cheque account statements to the District Social Welfare Officer.
7. To conduct survey of Sch. Caste/Sch. Tribe children attending schools and maintain basic statistics of the Taluk.

**Education:-**

8. To sanction pre-matric and Post-matric Scholarships to Sch. Caste/Sch. Tribe students studying from Vth to Xth Standards including maintenance of Accounts/Acquittances.
9. To maintain all social welfare Institutions in the Taluk and supervise all Grant-in-aid hostels both pre-matric and Post-matric.
10. To disburse award of Prize Money to the S.S.L.C. students who secure Ist Class in first attempt.
11. To ensure proper distribution of free uniforms, Text-books and other educational aids to Sch. Castes/Sch. Tribes School going children.
12. To Co-operative with Adult Education, Youth Services and Co-operative Department for starting their agencies in Harijan Basthis.
13. To supervise proper distribution of scholarships in the institutions including establishment of Book Banks.

**Health & Housing:-**

14. To supervise, implement construction of hostel buildings, Community centre buildings, Kalyan Mandiras, School buildings.

15. To identify, select and sponsor the names of eligible beneficiaries under HUDCO, NREP, RIGP, LCH to various implementing Departments except under Tribal Sub-Plan.
16. To co-operate with Officials/Officers of C.R.E. Cell to remedy the atrocities on Sch. Castes/ Sch. Tribes and he will be Member-Secretary for protection and safeguard of the Taluk Level Committee.
17. To Provide financial assistance to the victims of fire accidents and other natural calamities.
18. To initiate all land acquisition cases pertaining to grant of House sites, Burial grounds, establishment and extension of existing colonies, construction of buildings for location of Social Welfare institutions. Take possession of lands acquired leased, alienated for distribution of house sites to Sch. Castes/Sch. Tribe people. To secure Government waste lands from Revenue authorities for development and distribution of house sites.

**Economic Development:-**

19. To maintain agricultural Colonies of Sch. Castes/Sch. Tribes, organise establishment of joint farming, industrial, labour and service co-operative societies for the betterment of these people.
20. To conduct socio-economic survey and identify beneficiaries under SCP/IRDP/Tribal Sub-Plan/Anthyodaya/TRYSEM/Tali Bhagya/ IRDP/ Ganga Kalyana/ Bhagya Jyothi/ Negilu Bhagya as also sponsor and implement the programmes for the welfare of Sch. Castes and Sch. Tribes in the Taluk.
21. To identify, rehabilitate released bonded labourers.
22. To implement various schemes under 18% funds of Local Bodies.
23. To build up records to provide Financial Assistance to the persons contracting under inter-caste marriage.
24. To conduct survey for providing drinking water, electricity to Harijan Basthis and Residential houses.
25. To identify Sch. Caste/ Sch. Tribe persons eligible for Old Age pension, Widow Pension, Maternity benefits, Pension for Physically handicapped and persons suffering from Chronicl diseases and approach concerned authorities for relief.
26. To assist Sch. Caste/ Sch. Tribes to get their lands restored wherever the lands are alienated. This will include re-grants also.

**OTHERS:-**

27. To review the implementation of Government Orders relating to reservation and filling up of vacancies in favour of Sch. Castes/Sch. Tribes in various Government Department, Quasi Government Departments, Local Bodies, Companies or Industrial concerns including Banks and report to District Social Welfare Officers
28. To verify the genuinity of caste certificates referred by various Agencies.
29. To encourage enrolment of Members in Co-operatives, Youth Clubs, Mahila Mandals, Land Development Banks etc.,
30. Any work entrusted by District and State Officers including Zilla Parishats.

**R. SHANKAR**
Under Secretary to Government,
Social Welfare and Labour Department

PR-1234

**ಜಿಲ್ಲಾ ಖಜಾನೆ ಅಧಿಕಾರಿಯವರ ಕಛೇರಿ, ಧಾರವಾಡ**

**ಪ್ರಕಟಣೆ**

**ಸಂಖ್ಯೆ: ಜಿಖ:ಆಡಳಿತ:I:2003-04, ದಿನಾಂಕ: 20ನೇ ಅಕ್ಟೋಬರ್ 2003**

**ವಿಷಯ:** ಧಾರವಾಡ ಜಿಲ್ಲೆಯ ನವಲಗುಂದ ಮತ್ತು ಕುಂದಗೋಳ ಉಪ ಖಜಾನೆಗಳನ್ನು ಬ್ಯಾಂಕಿಂಗ್ ಖಜಾನೆಗಳನ್ನಾಗಿ ಪರಿವರ್ತಿಸಿ, ಚೆಕ್ ಪದ್ಧತಿಯನ್ನು ಜಾರಿಗೆ ತರುವ ಕುರಿತು.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 92 ಅಖಇ 2003 ದಿನಾಂಕ: 1.10.2003.
2) ಖಜಾನೆ ನಿರ್ದೇಶಕರು, ಬೆಂಗಳೂರು, ಇವರ ಪತ್ರ ಸಂ: ಖನಿ: ಪ್ರಕ್ರಿಯೆ:5:2002-03, ದಿನಾಂಕ: 3.10.2003, 20.10.2003.

ಉಲ್ಲೇಖಿತ ಸರ್ಕಾರಿ ಆದೇಶದಲ್ಲಿ ಧಾರವಾಡ ಜಿಲ್ಲೆಯ ನವಲಗುಂದ ಹಾಗೂ ಕುಂದಗೋಳ ನಾನ್ ಬ್ಯಾಂಕಿಂಗ್ ಉಪ ಖಜಾನೆಗಳನ್ನು ಬ್ಯಾಂಕಿಂಗ್ ಉಪ ಖಜಾನೆಗಳನ್ನಾಗಿ ಪರಿವರ್ತಿಸಿ "ನಿಗದಿತ ದಿನಾಂಕ" ದಂದು ಉಪ ಖಜಾನೆಗಳ ನಗದು ವಹಿವಾಟನ್ನು ಸ್ಥಳೀಯ ಸಿಂಡಿಕೇಟ್ ಬ್ಯಾಂಕ್‌ಗಳಿಗೆ ವರ್ಗಾಯಿಸಲು ಆದೇಶಿಸಿದೆ.

ಉಲ್ಲೇಖ (2) ರಲ್ಲಿ ಖಜಾನೆ ನಿರ್ದೇಶಕರು ಬೆಂಗಳೂರು, ಇವರು ನಿಗದಿತ ದಿನಾಂಕ: ಅಂದರೆ ದಿನಾಂಕ: 1.11.2003 ಉಪ ಖಜಾನೆಗಳ ನಗದು ವಹಿವಾಟನ್ನು ಸ್ಥಳೀಯ ಸಿಂಡಿಕೇಟ್ ಬ್ಯಾಂಕ್ ಶಾಖೆಗಳಿಗೆ ವರ್ಗಾಯಿಸಲು ಕ್ರಮ ಪಾಲಿಸುವಂತೆ ನಿರ್ದೇಶನ

ನೀಡಿದ್ದಾರೆ. ಆದ್ದರಿಂದ 1.11.2003 ರಿಂದ ನವಲಗುಂದ, ಕುಂದಗೋಳ ಉಪ ಖಜಾನೆಗಳು ಬ್ಯಾಂಕಿಂಗ್ ಖಜಾನೆಗಳಾಗಿ ಪರಿವರ್ತನೆಗೊಂಡು ಚೆಕ್ ಪದ್ಧತಿಯೊಂದಿಗೆ ಕಾರ್ಯನಿರ್ವಹಿಸುತ್ತವೆ ಎಂದು ಪ್ರಕಟಿಸಲಾಗಿದೆ. ತಾಲ್ಲೂಕಿನ ಉಪ ಖಜಾನೆಗಳಲ್ಲಿ ಹಣ ಸೆಳೆಯುವ ಅಧಿಕಾರಿಗಳು ಮತ್ತು ಪಿಂಚಣಿದಾರರು ಎಲ್ಲಾ ಸಾರ್ವಜನಿಕರು ಇನ್ನು ಮುಂದೆ (1.11.2003 ಮತ್ತು 2.11.2003 ರಜೆ ನಿಮಿತ್ತ) ದಿನಾಂಕ: 3.11.2003 ರಿಂದ ಉಪ ಖಜಾನೆಯ ಎಲ್ಲಾ ನಗದು ವಹಿವಾಟನ್ನು ಸ್ಥಳೀಯ ಸಿಂಡಿಕೇಟ್ ಬ್ಯಾಂಕ್ ನವಲಗುಂದ, ಕುಂದಗೋಳ ಶಾಖೆಗಳ ಮುಖಾಂತರ ನಡೆಸಲು ತಿಳಿಸಲಾಗಿದೆ.

ಈ ಹೊಸ ಪದ್ಧತಿಯಲ್ಲಿ ಪಿಂಚಣಿದಾರರಿಗೆ : ಬಟವಾಡೆ ಅಧಿಕಾರಿಗಳಿಗೆ ಅವರು ಸಲ್ಲಿಸಿದ ಬಿಲ್ಲುಗಳಿಗೆ ಉಪ ಖಜಾನೆಗಳಲ್ಲಿ ಚೆಕ್ ನೀಡಲಾಗುವುದು, ಚೆಕ್ಕನ್ನು ಸ್ಥಳೀಯ ಸಿಂಡಿಕೇಟ್ ಬ್ಯಾಂಕ್‌ನಲ್ಲಿ ನಗದು ಮಾಡಿಸಿಕೊಳ್ಳುವುದು. ಸರ್ಕಾರಕ್ಕೆ ಜಮೆ ಮಾಡಬೇಕಾದ ಹಣವನ್ನು ನಿಗದಿತ ಚಲನ್ ಫಾರ್ಮಗಳನ್ನು ಭರ್ತಿಮಾಡಿ ಸಿಂಡಿಕೇಟ್ ಬ್ಯಾಂಕ್‌ಗಳಲ್ಲಿ ತುಂಬತಕ್ಕದ್ದು. ಚಲನ್‌ಗಳಲ್ಲಿ 12 ಅಂಕಿಗಳ ಕೋಡ್ ಸಂಖ್ಯೆ ಕಡ್ಡಾಯವಾಗಿ ನಮೂದಿಸತಕ್ಕದ್ದು ಹಾಗೂ ಸಂಬಂಧಪಟ್ಟ ಅಧಿಕಾರಿಗಳಿಂದ ಮೇಲು ರುಜು ಪಡೆದಿರತಕ್ಕದ್ದು. ಇಲ್ಲದಿದ್ದರೆ ಬ್ಯಾಂಕ್‌ನಲ್ಲಿ ಚಲನ್‌ನ್ನು ಮಾನ್ಯಮಾಡಲಾಗುವುದಿಲ್ಲ.

ವಿಷಯ ಕುರಿತು ಯಾವುದೇ ತೊಂದರೆ : ಸಮಸ್ಯೆಗಳಿದ್ದಲ್ಲಿ ಸ್ಥಳೀಯವಾಗಿ ಪತ್ರಾಂಕಿತ ಉಪ ಖಜಾನೆ ಅಧಿಕಾರಿ ನವಲಗುಂದ ಫೋನ್ ಸಂಖ್ಯೆ: 419204 ಹಾಗೂ ಪತ್ರಾಂಕಿತ ಉಪ ಖಜಾನೆ ಅಧಿಕಾರಿ ಕುಂದಗೋಳ ಫೋನ್ ಸಂಖ್ಯೆ: 700204 ಇವರನ್ನು ಸಂಪರ್ಕಿಸುವುದು.

**ಬಿ.ಎಂ. ಪಾಟೀಲ**

ಪಿ.ಆರ್. 1235 ಜಿಲ್ಲಾ ಖಜಾನೆ ಅಧಿಕಾರಿ, ಧಾರವಾಡ.

**ಬಾಯ್ಲರುಗಳ ಸಹಾಯಕ ನಿರ್ದೇಶಕರ ಕಛೇರಿ, ಮತ್ತು ಅಧ್ಯಕ್ಷರು, ಬಾಯ್ಲರ್ ಅಟೆಂಡೆಂಟ್ಸ್ ಪರೀಕ್ಷಾ ಮಂಡಳಿ, ಕಾರ್ಮಿಕ ಭವನ, 2ನೇ ಮಹಡಿ, ಬನ್ನೇರುಘಟ್ಟ ರಸ್ತೆ, ಡೈರಿ ಸರ್ಕಲ್, ಬೆಂಗಳೂರು-560 029**

**ಅಧಿಸೂಚನೆ**

**ಸಂಖ್ಯೆ: ಬಿಟಿಟಿಇನ್‌ಲ್:ಬಿಎಇ:ಸಿಆರ್-107:2003-04, ದಿನಾಂಕ: 30ನೇ ಅಕ್ಟೋಬರ್ 2003**

**ವಿಷಯ:** ಪ್ರಥಮ ಮತ್ತು ದ್ವಿತೀಯ ದರ್ಜೆ ಅರ್ಹತಾ ಪ್ರಮಾಣ ಪತ್ರದ ಬಾಯ್ಲರ್ ಅಟೆಂಡೆಂಟ್ಸ್ ಪರೀಕ್ಷೆ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 110 ಕಾಬಾನೇ 2001, ದಿನಾಂಕ: 25.4.2001.

ಮುಂದಿನ ಬಾಯ್ಲರ್ ಅಟೆಂಡೆಂಟ್ಸ್ ಪರೀಕ್ಷೆಯನ್ನು ನಡೆಸಲು ಬಾಯ್ಲರ್ ಅಟೆಂಡೆಂಟ್ ಪರೀಕ್ಷಾ ಮಂಡಳಿಯು ಉದ್ದೇಶಿಸಲಾಗಿದೆ. ಸದರಿ ಪರೀಕ್ಷೆಗೆ ವಿವಿಧ ಜಿಲ್ಲೆಗಳಿಂದ ಬರುವ ಅರ್ಜಿಗಳ ಸಂಖ್ಯೆಯ ಮೇಲೆ, ಪರೀಕ್ಷಾ ಸ್ಥಳವನ್ನು ಮತ್ತು ದಿನಾಂಕವನ್ನು ನಿಗದಿಪಡಿಸಿ ಅಭ್ಯರ್ಥಿಗಳಿಗೆ ತಿಳಿಸಲಾಗುವುದು.

ಆಸಕ್ತ ಅಭ್ಯರ್ಥಿಗಳು ಪರೀಕ್ಷೆಯ ಅರ್ಜಿ ನಮೂನೆಗಳಿಗಾಗಿ ಮನವಿಯನ್ನು ಸ್ವವಿಳಾಸವುಳ್ಳ ಐದು ರೂಪಾಯಿಗಳ ಅಂಚೆ ಚೀಟಿ ಹಚ್ಚಿದ ಲಕೋಟೆಯೊಂದಿಗೆ ಕಾರ್ಯದರ್ಶಿ, ಬಾಯ್ಲರ್ ಅಟೆಂಡೆಂಟ್ಸ್ ಪರೀಕ್ಷಾ ಮಂಡಳಿ, ಕಾರ್ಮಿಕ ಭವನ, 2ನೇ ಮಹಡಿ, ಬೆಂಗಳೂರು ಡೈರಿ ಸರ್ಕಲ್ ಹತ್ತಿರ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29 ಇವರಿಗೆ ಸಲ್ಲಿಸಬೇಕು.

**ಕನಿಷ್ಠ ಅರ್ಹತೆ**

1. ಪ್ರಥಮ ದರ್ಜೆ ಅರ್ಹತಾ ಪ್ರಮಾಣ ಪತ್ರದ ಬಾಯ್ಲರ್ ಅಟೆಂಡೆಂಟ್ ಪರೀಕ್ಷೆಗೆ ಕುಳಿತುಕೊಳ್ಳಲಿಚ್ಛಿಸುವ ಅಭ್ಯರ್ಥಿಯ ವಯಸ್ಸು 21 ವರ್ಷಕ್ಕಿಂತ ಕಡಿಮೆ ಇರಬಾರದು ಮತ್ತು 500 ಚದರ ಅಡಿಗಿಂತ ಕಡಿಮೆ ಇರದ ಹೀಟಿಂಗ್ ಸರ್ಫೇಸ್ ಉಳ್ಳ ಬಾಯ್ಲರ್ ಮೇಲೆ 2 ವರ್ಷ ದ್ವಿತೀಯ ದರ್ಜೆ ಬಾಯ್ಲರ್, ಬಾಯ್ಲರ್ ಅಟೆಂಡೆಂಟ್ಸ್ ಪರೀಕ್ಷೆಯ ಅರ್ಹತಾ ಪ್ರಮಾಣ ಪತ್ರ ಹೊಂದಿ ಕೆಲಸ ಮಾಡಿರಬೇಕು.
2. ದ್ವಿತೀಯ ದರ್ಜೆ ಅರ್ಹತಾ ಪ್ರಮಾಣ ಪತ್ರದ ಬಾಯ್ಲರ್ ಅಟೆಂಡೆಂಟ್ಸ್ ಪರೀಕ್ಷೆಗೆ ಅಭ್ಯರ್ಥಿಯ ವಯಸ್ಸು 20 ವರ್ಷಕ್ಕಿಂತ ಕಡಿಮೆ ಇರಬಾರದು ಮತ್ತು ಯಾವುದಾದರೂ ಬಾಯ್ಲರ್ ಮೇಲೆ ಫೈರ್‌ಮನ್ : ಅಸಿಸ್ಟೆಂಟ್ ಫೈರ್‌ಮನ್ : ಡಾಂಕಿ ಮ್ಯಾನ್ ಆಗಿ ಕನಿಷ್ಠ ಮೂರು ವರ್ಷ ಕೆಲಸ ಮಾಡಿರಬೇಕು.
3. ಅಭ್ಯರ್ಥಿಗಳು ಮೊದಲನೇ ಮತ್ತು ಎರಡನೇ ದರ್ಜೆ ಪರಿಷ್ಕೃತ ಪರೀಕ್ಷಾ ಶುಲ್ಕವನ್ನು ಡಿಡಿ ಅಥವಾ ಪೇ ಆರ್ಡರ್ ಅಥವಾ ಚಲನ್ ಮುಖಾಂತರ ಸಂದಾಯ ಮಾಡತಕ್ಕದ್ದು. ಡಿಡಿ ಅಥವಾ ಪೇ ಆರ್ಡರ್ ಅನ್ನು ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರು ಕರ್ನಾಟಕ, ಬೆಂಗಳೂರು ಅವರ ಹೆಸರಿನಲ್ಲಿ ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆಯತಕ್ಕದ್ದು. ಚಲನ್ ಮುಖಾಂತರ ಪರೀಕ್ಷಾ ಶುಲ್ಕವನ್ನು ಸಂದಾಯ ಮಾಡಿದಲ್ಲಿ 0230 ಲೇಬರ್ ಅಂಡ್ ಎಂಪ್ಲಾಯಿಮೆಂಟ್ 103 ಫೀ ಫಾರ್ ಇನ್ಸ್‌ಪೆಕ್ಷನ್ ಆಫ್ ಸ್ಟೀಮ್ ಬಾಯ್ಲರ್ ಲೆಕ್ಕ ಶೀರ್ಷಿಕೆಯಲ್ಲಿ ಜಮ ಮಾಡತಕ್ಕದ್ದು.

   ಮೊದಲನೇ ದರ್ಜೆ ಬಾಯ್ಲರ್ ಅಟೆಂಡೆಂಟ್ಸ್ ಪರೀಕ್ಷಾ ಶುಲ್ಕ ರೂ. 100.00

   ಎರಡನೇ ದರ್ಜೆ ಬಾಯ್ಲರ್ ಅಟೆಂಡೆಂಟ್ಸ್ ಪರೀಕ್ಷಾ ಶುಲ್ಕ ರೂ. 50.00

ಭರ್ತಿ ಮಾಡಿದ ಅರ್ಜಿಗಳನ್ನು ಸ್ವೀಕರಿಸಲು ಕಡೆಯ ದಿನಾಂಕ: 15.12.2003 ಆಗಿರುತ್ತದೆ. ಹೆಚ್ಚಿನ ಮಾಹಿತಿಯನ್ನು ಸದರಿ ಕಛೇರಿಯಿಂದ ಪಡೆಯಬಹುದು.

**ಕೆ.ವಿ. ಚಂದ್ರಮೌಳಿ**

ಪಿ.ಆರ್. 1236 ಕಾರ್ಯದರ್ಶಿ,

ಬಾಯ್ಲರ್ ಅಟೆಂಡೆಂಟ್ಸ್ ಪರೀಕ್ಷಾ ಮಂಡಳಿ, ಬೆಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಕ್ರ. ಬಿ3.ಅಮೊ.ವಾಹನ.37/89-90, ದಿನಾಂಕ: 29ನೇ ಅಕ್ಟೋಬರ್ 2003**

**ಉಪಸ್ಥಿತರು:** ಶ್ರೀ ಶಿವರಾಜ್ ಸಿಂಗ್, ಭಾ.ಅ.ಸೇ. ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾದಿದಾರರು:** ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ.

**ಆರೋಪಿಗಳು:** 1) ಅಕ್ಬರ್ 2) ದಾಲಬೀರ್ 3) ಚಾಂದ್

**ಬಾಧ್ಯತೆದಾರರು:** ಶ್ರೀ ಹಾಜಿ ಮಹಮದ್ ಬಿನ್ ಹಾಜಿ ಹಸ್ಮಾಜಿ ಚೀಪಾಬ್ ಕಲ್, ಮಡಸೂರು ಅಂಚೆ, ತಾಲ್ಲೂಕು : ಜಿಲ್ಲೆ. ಮಧ್ಯಪ್ರದೇಶ ರಾಜ್ಯ.

**ಪ್ರಸ್ತಾವನೆ:**

ದಿ: 30.3.1990 ರಂದು ವಲಯ ಅರಣ್ಯಾಧಿಕಾರಿ ಶಿಕಾರಿಪುರ ವಲಯ ಮತ್ತು ಸಿಬ್ಬಂದಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿಕಾರಿಪುರ ತಾ. ಗ್ರಾಮ ಗ್ರಾಮಕ್ಕೆ ಹೋಗುವ ರಸ್ತೆಯಲ್ಲಿ ಪಂಚರ ಸಮಕ್ಷಮ ಮಹಜರ್ ಕ್ರಮ ನಡೆಸಿದಂತೆ, ನಳ್ಳಿನಕೊಪ್ಪ ಹತ್ತಿರ ರಾತ್ರಿ ಗಸ್ತು ಕಾರ್ಯದಲ್ಲಿದ್ದಾಗ ಒಂದು ವಾಹನವು ನಲ್ಲಿನಕೊಪ್ಪ ಕಡೆಯಿಂದ ಬರುವುದನ್ನು ತಡೆದು ತನಿಖೆಗಾಗಿ ನಿಲ್ಲಿಸಲೂ ಸೂಚಿಸಿದರು, ನಿಲ್ಲಿಸದೇ ವೇಗವಾಗಿ ಚಲಿಸಿದಾಗ ಇಲಾಖಾ ಜೀಪಿನಿಂದ ಬೆನ್ನಟ್ಟಿಕೊಂಡು ಹೋಗಿ ಮೇಲ್ಕಂಡ ಸ್ಥಳದಲ್ಲಿ ವಾಹನದ ಕಡೆ ಗುಂಡು ಹಾರಿಸಲಾಗಿ ಇಲಾಖಾ ವಾಹನದಿಂದ 25 ಅಡಿ ದೂರದಲ್ಲಿ ಸದರಿ ವಾಹನ ನಿಲ್ಲಿಸಿ ಆಸಾಮಿಗಳು ಲಾರಿಯಿಂದ ಇಳಿಯುತ್ತಿದ್ದಾಗ ಹಿಡಿದುಕೊಂಡು ನಂತರ ಲಾರಿ ನಂ. ಸಿಐಯು 9192 ಅನ್ನು ಪರಿಶೀಲಿಸಲಾಗಿ ಲಾರಿಯ ಒಳಗಡೆ ಶ್ರೀಗಂಧದ ಬೇರು ಮತ್ತು ತುಂಡುಗಳು ಇದ್ದವು. ಈ ತುಂಡುಗಳ ಮೇಲೆ ಇಲಾಖಾ ಪಾವಿರಲಿಲ್ಲ. ವಾಹನ, ಶ್ರೀಗಂಧ ಮತ್ತು ಆಸಾಮಿಗಳಾದ (1) ಅಕ್ಬರ್ ಬಿನ್ ಅಲ್ಲಬಾಷ್, ಚಿಕ್ಕಜಂಬೂರು, 2) ದಲ್ ಬೀರ್ ಬಿನ್ ಪರಂದ್ ಖಾನ್, ಹತೋನಿಯ ವಾಸಿ, ಚಿತ್ತೋಡು ಜಿಲ್ಲೆ, ರಾಜಸ್ಥಾನ್ 3) ಚಾಂದ್ ಬಿನ್ ಅಬ್ದುಲ್ ಕರೀಮ್, ಪ್ರತಾಪ್ ಗಡ್ ವಾಸಿ, ಚಿತ್ತೋಡು ಜಿಲ್ಲೆ, ರಾಜಸ್ಥಾನ್ ರನ್ನು ವಶಕ್ಕೆ ತೆಗೆದುಕೊಂಡು ನ್ಯಾಯಾಲಯಕ್ಕೆ ಒಪ್ಪಿಸಿದೆ. ಹಾಗೂ ಶ್ರೀಗಂಧ ಸಾಗಿಸಲು ರಹದಾರಿ ಇಲ್ಲವೆಂದು ತಿಳಿಸಿದ ಮೇರೆಗೆ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಲಾರಿ ನಂ. ಸಿಐಯು 9192 ಚಾಸ್ಸಿ ನಂ. 344046824053 ಮತ್ತು ಶ್ರೀಗಂಧ ಒಟ್ಟು 775 ಕೆ.ಜಿ. ಅನ್ನು ಜಪ್ತು ಮಾಡಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 62, 24(1) 85, 86, 84, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1963 ನಿಯಮ 156ರ ಪ್ರಕಾರ ಶಿಕಾರಿಪುರ ವಲಯದ ಅ.ಮೊ.ಸಂ. 302/89-90 ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ಇವರ ಸಮಕ್ಷಮ ಹಾಜರ್ ಪಡಿಸಿರುತ್ತದೆ. ನಂತರ ವಾಹನವನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ ಸಾಗರ ಇವರ ಸುಪರ್ದಿಗೆ ಕೊಟ್ಟಿರುತ್ತದೆ.

ನಂತರ ಈ ವಾಹನದ ಬಗ್ಗೆ: ಶ್ರೀ ಹಾಜಿ ಮಹಮದ್ ಬಿನ್ ಹಾಜಿ ಹಸ್ಮಾಜಿ ಚೀಪಾಬ್ ಕಲ್, ಮಡಸೂರು ಅಂಚೆ, ತಾಲ್ಲೂಕು, ಜಿಲ್ಲೆ. ಮಧ್ಯಪ್ರದೇಶ ರಾಜ್ಯ, ಇವರು ದಿ: 12.4.1990 ರಲ್ಲಿ ಈ ನ್ಯಾಯಾಲಯಕ್ಕೆ ಕ್ಲೈಮ್ ಅರ್ಜಿ ಸಲ್ಲಿಸಿ ಈ ರೀತಿ ಕೋರಿರುತ್ತಾರೆ. ಅರಣ್ಯ ಅಪರಾಧದಲ್ಲಿ ವಲಯ ಅರಣ್ಯಾಧಿಕಾರಿ ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಸಿಐಯು 9192 ರ ಭಾಧ್ಯತೆದಾರರೆಂದು, ಈ ಕೃತ್ಯದಲ್ಲಿ ಬಾಧ್ಯತೆದಾರರು ಭಾಗಿಯಾಗಿಲ್ಲವೆಂದು ಈ ಕೇಸು ಸುಳ್ಳಿನಿಂದ ಕೂಡಿದೆ ಎಂದು ಈ ಲಾರಿಯ ಮೇಲೆ ಸುಳ್ಳು ಕೇಸು ದಾಖಲಿಸಿದ್ದಾರೆಂದು, ಈ ವಾಹನವನ್ನು 1986 ರಲ್ಲಿ ಲೋನ್ ಮಾಡಿ ಖರೀದಿಸಿದೆಂದು, ಇದು ಜಪ್ತು ಮಾಡುವಾಗ ಸುಸ್ಥಿತಿಯಲ್ಲಿದೆ ಎಂದು ವಾಹನ ಜಪ್ತು ಮಾಡುವಾಗ ಎಲ್ಲಾ ದಾಖಲೆಗಳು ವಾಹನದಲ್ಲಿತ್ತೆಂದು ಮತ್ತು ಈ ಕೃತ್ಯ ನಡೆಯುವಾಗ ವಾಹನದ ಮಾಲೀಕರು ಮಧ್ಯಪ್ರದೇಶ ರಾಜ್ಯದ ಮಡಸೂರಿನಲ್ಲಿದ್ದರೆಂದು, ಇವರು ಪ್ರತ್ಯಕ್ಷವಾಗಲೀ, ಪರೋಕ್ಷವಾಗಲೀ ಈ ಕೃತ್ಯದಲ್ಲಿ ಭಾಗಿಯಾಗಿಲ್ಲವೆಂದು ಈ ವಾಹನವನ್ನು ಮಡಸೂರಿನಿಂದ ಬೇಳೆಯನ್ನು ಪೂನಾಕ್ಕೆ ಸಾಗಿಸಲು ಬಾಡಿಗೆಗೆ ಅನುಮತಿ ನೀಡಿದ್ದಾರೆಂದು, ಈ ವಾಹನವನ್ನು ಅರಣ್ಯ ಇಲಾಖೆಯ ಕಾಂಪೌಂಡಿನಲ್ಲಿ ಹಾಗೆ ನಿಲ್ಲಿಸಿದರೆ ಮಳೆ, ಗಾಳಿ, ಬಿಸಿಲಿಗೆ ಹಾಳಾಗಿ ನಷ್ಟ ಉಂಟಾಗುತ್ತದೆ ಎಂದು, ಈ ವಾಹನದ ಲೋನ್ ಹಣವು ಇನ್ನು ತೀರಿಲ್ಲವೆಂದು, ಆದ್ದರಿಂದ ಈ ವಾಹನವನ್ನು ಬಾಧ್ಯತೆದಾರರಿಗೆ ಬಿಟ್ಟುಕೊಡುವಾಗ ಘನ ನ್ಯಾಯಾಲಯವು ವಿಧಿಸುವ ಷರತ್ತುಗಳಿಗೆ ಬದ್ಧರಿದ್ದಾರೆಂದು, ವಾಹನ ಬಿಟ್ಟುಕೊಡಲು ಕೋರಿರುತ್ತಾರೆ.

ಸಹಾಯಕ ಸರ್ಕಾರಿ ಅಭಿಯೋಜಕರು ಸಾಗರ ಇವರು ದಿ: 19.5.1990 ರಂದು ಮಧ್ಯಂತರ ಅರ್ಜಿ ಸಲ್ಲಿಸಿರುತ್ತಾರೆ. ಮತ್ತು ವಾಹನವನ್ನು ವಾಹನ ಮಾಲೀಕರಿಗೆ ಬಿಟ್ಟುಕೊಡದೆ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ನ್ಯಾಯಾಲಯದ ಆದೇಶ ಸಮ ಸಂ. ದಿ: 28.7.1990 ರಲ್ಲಿ ನಾಲ್ಕು ಷರತ್ತು ವಿಧಿಸಿ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಸಾಗರ ಇವರಿಂದ ಮೌಲ್ಯ ನಿಗದಿಪಡಿಸಿದಂತೆ ಬ್ಯಾಂಕ್ ಗ್ಯಾರಂಟಿ ಅನ್ನು ಒಪ್ಪಿಸಿದಲ್ಲಿ ಖಾಲಿ ವಾಹನವನ್ನು ಮಧ್ಯಂತರ ಅವಧಿಗೆ ಬಿಡುಗಡೆ ಮಾಡಲು ಆದೇಶವಾಗಿರುತ್ತದೆ. ಅದರಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ವಾಹನದ ಮೌಲ್ಯ ರೂ. ಒಂದು ಲಕ್ಷ ನಿಗದಿಪಡಿಸಿರುತ್ತಾರೆ. ಅದರಂತೆ ರೂ. 50000/- ಕ್ಕೆ ಕ್ಯಾಷ್ ಡಿಪಾಸಿಟ್ ಮತ್ತು ಉಳಿದ ರೂ. 50000/- ಕ್ಕೆ ಸ್ಥಳೀಯ ಶ್ಯೂರಿಟಿಯನ್ನು ಕೊಡಲು ದಿ: 2.12.1991 ರಲ್ಲಿ ಪುನಃ ಆದೇಶ ಹೊರಡಿಸಿದೆ. ಆದರೆ ವಾಹನ ಮಾಲೀಕರು ಶ್ಯೂರಟಿ ಮತ್ತು ಬ್ಯಾಂಕ್ ಗ್ಯಾರಂಟಿಯನ್ನು 2 ವರ್ಷಗಳು ಕಳೆದ ಬಳಿಕ ಈ ನ್ಯಾಯಾಲಯಕ್ಕೆ ಸಲ್ಲಿಸದಿಂದ ಮತ್ತು ಸ್ಥಳೀಯ ಶ್ಯೂರಟಿಯನ್ನು ಸಲ್ಲಿಸಲು ಆಗದೆ ಇದ್ದುದರಿಂದ ವಾಹನ ಬಿಟ್ಟುಕೊಟ್ಟಿರುವುದಿಲ್ಲ. ಈ ಆದೇಶದ ಮೇಲೆ ವಾಹನ ಮಾಲೀಕರು ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಶಿವಮೊಗ್ಗ ಇಲ್ಲಿ ಕ್ರಿ.ಮಿ. ಅ.ನಂ. 48/93 ರ ದಿ: 29.11.1993 ರಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಆದೇಶವನ್ನು ಎತ್ತಿ ಹಿಡಿದಿದೆ. ಈ ಆದೇಶದ ಮೇಲೆ ವಾಹನ ಮಾಲೀಕರು ಮಾನ್ಯ ಉಚ್ಚ ನ್ಯಾಯಾಲಯ ಬೆಂಗಳೂರು ಇಲ್ಲಿ ಕ್ರಿ.ಮಿ.ರಿ. ಪಿಟಿಷನ್ ನಂ. 23/94ರ ದಿ: 2.2.1994ರ ಆದೇಶದಲ್ಲಿ ವಾಹನ ಮಾಲೀಕರ ಅರ್ಜಿಯನ್ನು ತಿರಸ್ಕರಿಸಿ ಆದೇಶ ಹೊರಡಿಸಿರುತ್ತದೆ. ನಂತರ ಈ ವಾಹನದ ಬಗ್ಗೆ ಈ ಕೆಳಗಿನಂತೆ ಸಾಕ್ಷಿಗಳ ಹೇಳಿಕೆ ಪಡೆಯಲಾಯಿತು.

ದಿ: 30.5.1992 ರಂದು ಶ್ರೀ ಎಸ್. ಜಯಣ್ಣ, ವನಪಾಲಕ, ಚೋರಡಿ ಶಾಖೆ, ಇವರ ಹೇಳಿಕೆಯಲ್ಲಿ 1990 ರಲ್ಲಿ ನಾನು ಶಿಕಾರಿಪುರ ವಲಯದ ಜಕ್ಕನಹಳ್ಳಿ ಶಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ದಿ: 30.3.1990 ರಂದು ನಾನು ಮತ್ತು ವಲಯ ಅರಣ್ಯಾಧಿಕಾರಿ ಶಿಕಾರಿಪುರ ಬಂದ ಖಚಿತ ವರ್ತಮಾನದ ಮೇರೆಗೆ ನಳಿನಿಕೊಪ್ಪ ಗ್ರಾಮದ ಹತ್ತಿರ ಕಾಯುತ್ತಿರುವಾಗ ಬೆಳಗಿನ ಜಾವ 4 ಗಂಟೆ ಸಮಯದಲ್ಲಿ ವಾಹನ ನಿಲ್ಲಿಸಲು ಕೈಮಾಡಿದೆವು. ಆದರೆ ಚಾಲಕನು ವಾಹನವನ್ನು ನಿಲ್ಲಿಸದೆ ಶಿಕಾರಿಪುರ ಕಡೆ ವೇಗವಾಗಿ ಚಲಿಸಿಕೊಂಡು ಹೋದ. ನಾವು ಕೂಡಲೇ ಇಲಾಖಾ ಜೀಪ್ ನಂ. ಎಂವೈಜಿ 2404 ನಲ್ಲಿ ಹಿಂಬಾಲಿಸಿಕೊಂಡು ಹೋದೆವು. ಗಾಮ ಎಂಬ ಊರಿನ ಹತ್ತಿರ ಈ ವಾಹನವನ್ನು ಸಮೀಪಿಸಿ ಗಾಳಿಯಲ್ಲಿ ಗುಂಡು ಹಾರಿಸಿದೆವು. ಅಲ್ಲಿಂದ 25 ಅಡಿ ದೂರದಲ್ಲಿ ವಾಹನ ನಿಂತಿತ್ತು. ಅದರಲ್ಲಿದ್ದ ಕೆಲವರು ಕೆಳಗಿಳಿದು ಓಡಿ ಹೋಗಲು ಯತ್ನಿಸಲ್ಪಟ್ಟಾಗ ನಾವುಗಳು ಕೂಡಲೇ ಜೀಪಿನಿಂದ ಇಳಿದು ಮೂವರನ್ನು ಹಿಡಿದುಕೊಂಡೆವು. ಮತ್ತು ಉಳಿದ ಇಬ್ಬರು ಕೈಗೆ ಸಿಕ್ಕದೆ ಓಡಿ ಹೋದರು. ಹಿಡಿದುಕೊಂಡ ವ್ಯಕ್ತಿಯಾದ 1) ಅಕ್ಬರ್ 2) ದಲ್ ಬೀರ್ 3) ಚಾಂದ್ ತಿಳಿಸಿದನು. ಅವರನ್ನು ವಾಹನದ ಹತ್ತಿರ ಕರೆದುಕೊಂಡು ಬಂದು ವಾಹನ ಪರಿಶೀಲಿಸಲಾಗಿ ಅದರ ಮೇಲೆ ಹಾಜಿ ಎಂ ಹಾಜಿ ಹುಸನ್, ಮಂಡಸೂರು ಎಂದು ಬರೆದಿದ್ದು, ಈ ವಾಹನದ ಟಾರ್ ಪೋಲ್ ನ್ನು ಬಿಚ್ಚಿ ನೋಡಲಾಗಿ ಕೆಲವು ಮರಗಳ ತುಂಡುಗಳು ಇದ್ದು ಅವುಗಳು ಶ್ರೀಗಂಧದ ತುಂಡುಗಳೆಂದು, ಮೇಲೆ ಹಿಡಿದ ಆಸಾಮಿಗಳು ರಹದಾರಿ ಇಲ್ಲವೆಂದು ಹೇಳಿದರು. ಅದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಶ್ರೀಗಂಧದ ತುಂಡುಗಳೆಂದು ಎಣಿಸಿ ಒಟ್ಟು 160 ತುಂಡುಗಳು 682 ಚಕ್ಕೆಗಳು ಇದ್ದು ವಿವರ ಮಹಜರ್ ನಲ್ಲಿ ಬರೆದು ಅವುಗಳಿಗೆ ಕೆಂಪು ಬಣ್ಣದಿಂದ ನಂಬರ್ ಕೊಟ್ಟು ಶ್ರೀಗಂಧದ ತುಂಡುಗಳ ಮತ್ತು ಲಾರಿ ಮೇಲೆ ಇಲಾಖಾ ಚಾಪಾ ಹೊಡೆದು ಸದರಿ ವಾಹನ ಮತ್ತು ಶ್ರೀಗಂಧದ ತುಂಡುಗಳು ವಿಚಾರಣಾ ಕಾಲದಲ್ಲಿ ಗುರುತು ಹಿಡಿಯುವ ಸಲುವಾಗಿ ಆಗಿರುತ್ತದೆ. ಲಾರಿಯಲ್ಲಿ ದೊರೆತ ಶ್ರೀಗಂಧದ ತುಂಡುಗಳ ತೂಕ 775 ಕೆ.ಜಿ. ಆಗಿದ್ದು ಅವುಗಳ ಅಂದಾಜು ಬೆಲೆ ರೂ. 72000/- ಎಂದು ಮಹಜರ್ ನಲ್ಲಿ ಬರೆದ ಎಲ್ಲಾ ವಿಷಯಗಳು ನಿಜವಾಗಿರುತ್ತದೆ. ಶ್ರೀಗಂಧ ಮತ್ತು ಚಕ್ಕೆಗಳು ನೋಡಿದರೆ ಗುರುತಿಸುತ್ತೇನೆ. ಸದರಿ ವಾಹನ ಮತ್ತು ಶ್ರೀಗಂಧದ ತುಂಡುಗಳು ಸಾಕ್ಷಿಗೆ ತೋರಿಸಿದೆ. ಪುನಃ 22.6.2002 ರಂದು ಕರೆಸಿ ಸತ್ಯ ಪ್ರತಿಜ್ಞೆ ಭೋದಿಸಲಾಯಿತು. ಮೂರು ಜನ ಆರೋಪಿಗಳ ಹೆಸರು ವಿಳಾಸ ಕೇಳಲಾಯಿತು. ಆದರೆ ಓಡಿ ಹೋದವರ ಹೆಸರು ಹೇಳಲು ನಿರಾಕರಿಸಿದರು. ನಳಿನಕೊಪ್ಪ ಗ್ರಾಮದಿಂದ ಶ್ರೀಗಂಧವನ್ನು ತುಂಬಿಕೊಂಡು ಬಂದಿರುವುದಾಗಿ ಹೇಳಿದರು. ಅದರಿಂದ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಪ್ರಾರ್ಥಿಸುತ್ತೇನೆ. ಪಾಟಿ ಸವಾಲು ಶ್ರೀ ಕೆ.ಟಿ. ಶೆಟ್ಟಿ ವಕೀಲರವರಿಂದ: ಈ ವಾಹನ ಮಧ್ಯಪ್ರದೇಶದ್ದಾಗಿದೆ. ಹಾಜಿ ಎಂ ಹಾಜಿ ಹುಸೇನ್, ಮಡಸೂರು ಅಂತ ತಿಳಿದಿದೆ. ಇವರು ಲಾರಿಯಲ್ಲಿ ಇರಲಿಲ್ಲ. ನಾನು ಈ ಬಗ್ಗೆ ತನಿಖೆ ಮಾಡಲಿಲ್ಲ. ವಲಯ ಅರಣ್ಯಾಧಿಕಾರಿ ಮಾಡಿರಬಹುದು. ಈ ಪ್ರಕರಣ ಅಂತಿಮ ವರದಿ ಸಲ್ಲಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿಗಳಿಗೆ ಗೊತ್ತು. ಹಿಡಿದ ಗಂಧವು ಈಗ ಎಲ್ಲಿದೆ ಎಂದು ನನಗೆ ಗೊತ್ತಿಲ್ಲ. ಮೊದಲಬಾರಿಗೆ ಈ ವಾಹನವನ್ನು ನಲ್ಲಿನಕೊಪ್ಪ ಸರ್ಕಲ್ ನಲ್ಲಿ ನೋಡಿದೆವು. ನಂತರ 20 ಕಿ.ಮೀ. ಚೇಸ್ ಮಾಡಿ ಗಾಮ ಕ್ರಾಸ್ ನಲ್ಲಿ ನಿಂತಿತ್ತು. ವಾಹನ ಹಿಡಿದಾಗ ಬೆಳಗಿನ ಜಾವ 4.30 ಗಂಟೆ ಆಗಿತ್ತು. ಮೊದಲು ನೋಡಿದಾಗ 4 ಗಂಟೆ ಆಗಿತ್ತು. ನಾನು ಚಾಲಕ ವಾಸು, ವಲಯ ಅರಣ್ಯಾಧಿಕಾರಿ, ಸಿಬ್ಬಂದಿ ನರಸಿಂಹಮೂರ್ತಿ, ಬೀಮಪ್ಪ, ಬೀರಪ್ಪ ಗಳಿದ್ದೆವು. ಬೆಳಿಗ್ಗೆ 5 ರಿಂದ 6.20 ರವರೆಗೆ ಮಹಜರ್ ಬರೆದೆವು. ಗ್ರಾಮಸ್ಥರು ಬರಲು ನಿರಾಕರಿಸಿದರು ಸಹಿ ಪಡೆದಿರುವುದಿಲ್ಲ. ಕಚೇರಿಗೆ ಬಂದು ಶ್ರೀಗಂದ ತೂಕ ಮಾಡಿದೆವು. ಶ್ರೀಗಂಧ ತೂಕ ಮಾಡಿದ ಬಗ್ಗೆ ಬೇರೆ ಮಹಜರ್ ಬರೆಯಲಿಲ್ಲ. ವನಪಾಲಕರಿಗೆ ತರಬೇತಿ ಕಾಲದಲ್ಲಿ ಮರಗಳ ಬಗ್ಗೆ ಮಾಹಿತಿ ನೀಡಿರುತ್ತಾರೆ. ಸ್ಥಳದಲ್ಲಿ ಗಂಧ ಹಾಗೂ ವಾಹನ ಆರೋಪಿಯನ್ನು ಹಿಡಿದಿಲ್ಲವೆಂದು ಹೇಳುವುದು ಸರಿಯಲ್ಲ. ಆರೋಪಿಗಳ ಮೇಲೆ ನ್ಯಾಯಾಲಯದಲ್ಲಿ ಹಾಕಿರುವ ಕೇಸು ಏನಾಗಿದೆ ಎಂದು ಗೊತ್ತಿಲ್ಲ. ಸುಳ್ಳು ಕೇಸು ಹಾಕಿ ಸುಳ್ಳು ಸಾಕ್ಷಿ ಹೇಳುತ್ತೇನೆ, ಬೆನ್ನಟ್ಟಿಕೊಂಡು ಹೋಗಿಲ್ಲ, ಗಾಳಿಯಲ್ಲಿ ಗುಂಡು ಹಾರಿಸಿಲ್ಲ, ಶ್ರೀಗಂಧದ ಮೇಲೆ ಗುರುತಿನ ಸೀಲು ಹಾಕಿಲ್ಲವೆಂದು ಹೇಳುವುದು ಸರಿಯಲ್ಲ.

ಬಾಧ್ಯತೆದಾರರಿಂದ ಶ್ರೀ ಹಾಜಿ ಯವರ ಹೇಳಿಕೆ: ದಿ: 4.2.1995 ರಲ್ಲಿ ಶ್ರೀ ಕೆ.ಟಿ. ಶೆಟ್ಟಿ ವಕೀಲರವರಿಂದ, ನಾನು ಮಧ್ಯಪ್ರದೇಶ ರಾಜ್ಯದ ಮಂಡಸೂರು ನಿವಾಸಿಯಾಗಿರುತ್ತೇನೆ. ಸದರಿ ಜಪ್ತಾದ ವಾಹನದ ಮಾಲೀಕ ನಾನೇ ಆಗಿರುತ್ತೇನೆ. ಲಾರಿಗೆ ಬೇರೆ ಚಾಲಕನನ್ನು ನೇಮಿಸಿರುತ್ತೇನೆ. ಲಾರಿ ಪಬ್ಲಿಕ್ ಕ್ಯಾರಿಯರ್ ಆಗಿರುತ್ತದೆ. ನಾನು ಆ ದಿನ ರಾಜಸ್ಥಾನದ ಪ್ರಾತಾಪ್ ಗಡದಿಂದ ಬೇಳೆ ಲೋಡನ್ನು ಪೂನಾಕ್ಕೆ ಕಳಿಸಲು ಟ್ರಾನ್ಸ್ ಪೋರ್ಟ್ ಕಂಪನಿ ಮೂಲಕ ಬುಕ್ ಮಾಡಿದ್ದು ಇರುತ್ತದೆ. ದೀಪಕ್ ಟ್ರಾನ್ಸ್ ಪೋರ್ಟ್ ಸರ್ವಿಸ್ ಮಂಡಸೂರು ಇವರ ಮೂಲಕ ಲಾರಿಯನ್ನು ಕಳಿಸಿರುತ್ತದೆ. ಚಾಲಕನ ಹೆಸರು ಚಾಂದ್ ಮಹಮದ್ ದಲವೀರ್, ಮಂಡಸೂರಿನಲ್ಲಿ ಬಾಡಿಗೆ ರೂಮಿನಲ್ಲಿ ವಾಸವಾಗಿದ್ದನು. ಚಾಲಕನ ಪರಿಚಯ 4-5 ವರ್ಷಗಳಿಂದ ಆಗಿದೆ. ತಿಂಗಳುವಾರು ವೇತನ ಆಧಾರದ ಮೇಲೆ ನೇಮಿಸಿಕೊಂಡಿದ್ದೇನೆ. ಒಳ್ಳೆಯ ನಡತೆ ಉಳ್ಳವನು. ಪೂನಾದಿಂದ ಬೇಳೆಯನ್ನು ಕೊಟ್ಟು ಬಾಂಬೆಯಿಂದ ಸಿಮೆಂಟ್ ಪ್ಯಾಕ್ಟರಿ ಮಿಷನರಿಯನ್ನು ಲೋಡ್ ಮಾಡಿ ಹಿಂತಿರುಗಿ ಬರಲು ಹೇಳಿದೆನು. 8 ದಿನಗಳಲ್ಲಿ ಈ ಕೆಲಸ ಮಾಡಬಹುದಾಗಿತ್ತು. ಪೂನಾಕ್ಕೆ ದೂರವಾಣಿ ಮೂಲಕ ವಿಚಾರಿಸಿದೆನು. ಚಾಲಕ ಬೇಳೆ ಇಳಿಸಿ ಹೋಗಿದ್ದಾನೆಂದು ತಿಳಿಸಿದರು. ಚಾಲಕನು ಶಿವಮೊಗ್ಗ ಜೈಲಿನಿಂದ ಅವರ ಸಂಬಂಧಿಕರಿಗೆ ತಂತಿ ಸಂದೇಶ ಕಳಿಸಿದ್ದನ್ನು ಲಾರಿ ಹಿಡಿದ ಬಗ್ಗೆ ತಿಳಿಸಿರುತ್ತಾನೆ. ಈರುಳ್ಳಿ ಲೋಡನ್ನು ದಾವಣಗೆರೆಗೆ ಇಳಿಸಿ ಸಿರ್ಸಿಗೆ ಲಾರಿಯನ್ನು ಕೊಂಡು ಒಯ್ಯಲು ಟ್ರಾನ್ಸ್ ಪೋರ್ಟ್ ರವರು ತಿಳಿಸಿದಂತೆ ಸಿರ್ಸಿಗೆ ಹೋಗುವಾಗ ಶಿಕಾರಿಪುರ ಬಳಿ ಜೀಪಿನಲ್ಲಿ ಬಂದ ವ್ಯಕ್ತಿಗಳು ಲಾರಿಯನ್ನು ನಿಲ್ಲಿಸಿ ಒಂದು ಲೋಡ್ ಬಾಡಿಗೆ ಇದೆ ಎಂದು ಅಂಬ್ಲಿಗೋಳಕ್ಕೆ ಹೋಗಿ ಶ್ರೀಗಂಧವನ್ನು ಲಾರಿಗೆ ತುಂಬಿದರು. ಅದಕ್ಕೆ ಚಾಲಕನು ಪ್ರತಿಭಟಿಸಿದಾಗ ಅರಣ್ಯ ಇಲಾಖೆ ಸಿಬ್ಬಂದಿಯವರು ಸೇರಿ ಶ್ರೀಗಂಧ ತುಂಬಿದರು. ನಂತರ ಶಿಕಾರಿಪುರದಲ್ಲಿ ಶ್ರೀಗಂಧ ತುಂಬಿದರು. ಚಾಲಕ ನನಗೆ ನಂತರ ಗಾಮ ರಸ್ತೆ ಬಳಿ ಬಂದು ಕೇಸು ದಾಖಲಿಸಿದರು ಎಂದು ತಿಳಿಸಿದ. ನಂತರ ಸಾಗರಕ್ಕೆ ಬಂದು ವಕೀಲರನ್ನು ಭೇಟಿ ಮಾಡಿ ಕೋರ್ಟಿಗೆ ಅರ್ಜಿ ಸಲ್ಲಿಸಿದೆ. ಈ ಮೊಕದ್ದಮೆಯಲ್ಲಿ ನಾನು ಯಾವುದೇ ರೀತಿಯಲ್ಲಿ ಭಾಗಿಯಾಗಿಲ್ಲ. ಜಪ್ತಾದ ದಿನ ನಾನು ನನ್ನ ಊರಿನಲ್ಲಿ ಮನೆಯಲ್ಲಿ ಇದ್ದೆನು. ನನ್ನ ಮೇಲೆ ಈ ಬಗ್ಗೆ ವೈಯಕ್ತಿಕವಾಗಿ ಕ್ರಿಮಿನಲ್ ಕೇಸು ಹೂಡಿದ್ದು ಇರುವುದಿಲ್ಲ. ಈಗ ಡ್ರೈವರ್ ಎಲ್ಲಿದ್ದಾನೆ ಎಂದು ಗೊತ್ತಿಲ್ಲ. ಚಾಲಕನ ಭಾವ ಮಂಡಸೂರಿನಲ್ಲಿ ಇದ್ದಾನೆ. ಚಾಲಕನು ಮಕ್ಕಳನ್ನು ಕರೆದುಕೊಂಡು ಎಲ್ಲಿಗೋ ಹೋಗಿದ್ದಾನೆಂದು ತಿಳಿಸಿದನು. ಲಾರಿಯನ್ನು ಬಿಟ್ಟುಕೊಡಲು ಕೋರುತ್ತೇನೆ. ದಿ: 22.11.1997 ರಲ್ಲಿ ಪುನಃ ಸಾಕ್ಷಿಯನ್ನು ಕರೆಯಿಸಿ ಸತ್ಯ ಪ್ರತಿಜ್ಞೆ ಭೋದಿಸಿ ಪಾಟಿ ಸವಾಲು ಎಪಿಪಿ

ಯವರಿಂದ: ನಮ್ಮ ಲಾರಿಗೆ ಚಾಂದ್ ಮೊಹಮದ್ ಮತ್ತು ದಲಬೀರ್ ಸಿಂಗ್ ಅನ್ನುವವನು ಡ್ರೈವರ್ ಆಗಿದ್ದು ಅವನು ಈಗ ರಾಜಸ್ಥಾನದಲ್ಲಿ ಇದ್ದಾನೆ. ಆದರೆ ಈಗ ಎಲ್ಲಿ ವಾಸವಾಗಿದ್ದಾನೆ ಎಂದು ಗೊತ್ತಿಲ್ಲ. ನಾನು ಲಾರಿ ಚಾಲಕನಿಗೆ ಜಾಮೀನು ನೀಡಿದ ನಂತರ ಫಿರೋಜ್ ಅಂಡ್ ಕಂಪನಿಯಲ್ಲಿ 4 ತಿಂಗಳು ಕೆಲಸ ಮಾಡಿದ. ಅವನ ಭಾವನ ಹೆಸರು ನನಗೆ ಗೊತ್ತಿಲ್ಲ. ಅವನ ಭಾವ ಟೆಲಿಗ್ರಾಂ ತಂದು ಕೊಟ್ಟಿರುತ್ತಾನೆ. ಅವನು ಪ್ರತಾಪ್ ಗಡದಲ್ಲಿ ವಾಸವಾಗಿದ್ದಾನೆ. ಅವನ ವಿಳಾಸ ಗೊತ್ತಿಲ್ಲ.

ನಂತರ ದಿ: 6.9.2003 ರಂದು ಸಹಾಯಕ ಸರ್ಕಾರಿ ಅಭಿಯೋಜಕರು ವಾದದಲ್ಲಿ ವಾಹನವು ಶ್ರೀಗಂಧ ಅಕ್ರಮ ಸಾಗಾಣಿಕೆಯಲ್ಲಿ ತೊಡಗಿದಾಗ ಶಿಕಾರಿಪುರ ವಲಯ ಅರಣ್ಯಾಧಿಕಾರಿ ಇವರು ಹಿಡಿದು ಕೇಸು ದಾಖಲು ಮಾಡಿರುವುದರಿಂದ ಈ ವಾಹನವು ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ತೊಡಗಿರುವುದು ಖಚಿತವಾಗಿರುತ್ತದೆ. ಈ ವಾಹನವನ್ನು ವಾಹನ ಮಾಲೀಕರಿಗೆ ಬಿಟ್ಟುಕೊಟ್ಟಲ್ಲಿ ಇಂತಹ ಕೃತ್ಯಗಳಲ್ಲಿ ಪುನಃ ತೊಡಗಿಸುವ ಸಾಧ್ಯತೆ ಇರುತ್ತದೆ. ಅದರಿಂದ ಈ ವಾಹನ ಮತ್ತು ಶ್ರೀಗಂಧವನ್ನು ಸರ್ಕಾರಕ್ಕೆ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಳ್ಳಲು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ದಿನಾಂಕ: 20.9.2003 ರಂದು ಶ್ರೀ ಕೆ.ಟಿ. ಶೆಟ್ಟಿ, ವಕೀಲರು ವಾದ ಮಾಡಿ ಸಾಕ್ಷಿಗಳ ಹೇಳಿಕೆಗಳು ಒಂದೊಂದು ತಾಳೆಯಾಗುವುದಿಲ್ಲವೆಂದು ಇದರ ಆಧಾರದ ಮೇಲೆ ಮತ್ತು ಈ ವಾಹನದ ಮಾಲೀಕರು ಮಧ್ಯಪ್ರದೇಶ ರಾಜ್ಯದವರಾಗಿದ್ದು ಈ ಕೃತ್ಯ ನಡೆದ ಸ್ಥಳದಿಂದ ಬಹಳ ದೂರದ ಊರಿನವರಾಗಿದ್ದು, ಈ ಕೃತ್ಯದಲ್ಲಿ ಪ್ರತ್ಯಕ್ಷವಾಗಲೀ, ಪರೋಕ್ಷವಾಗಲೀ ಭಾಗಿಯಾಗಿಲ್ಲವೆಂದು ವಾಹನವನ್ನು ವಾಹನ ಮಾಲೀಕರಿಗೆ ಬಿಟ್ಟುಕೊಡಲು ಕೋರಿರುತ್ತಾರೆ.

ಮೇಲಿನ ಎಲ್ಲ ಅಂಶಗಳನ್ನು ಕೂಲಂಕುಷವಾಗಿ ಎಲ್ಲಾ ದಾಖಲೆಗಳನ್ನು ಎಲ್ಲಾ ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿ ನನಗೆ ಈ ಕೆಳಕಂಡಂತೆ ಕಂಡು ಬರುತ್ತದೆ.

1. ಈ ವಾಹನವನ್ನು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿರುತ್ತದೆ.
2. ವಾಹನ ಮಾಲೀಕರು ಈ ಕಳ್ಳ ಸಾಗಾಣಿಕೆಯ ಪ್ರಕರಣದಲ್ಲಿ ನೇರವಾಗಿ ಸಾಮೀಲಾಗಿರುವುದಿಲ್ಲ. ಆದರೆ ಈ ಕಳ್ಳ ಸಾಗಾಣಿಕೆ ಅವರ ತಿಳುವಳಿಕೆ ಇಲ್ಲದೆ ಆಗಿದೆ ಎಂದು ಸಾಬೀತುಪಡಿಸಲು ವಾಹನ ಮಾಲೀಕರು ವಿಫಲರಾಗಿರುತ್ತಾರೆ.
3. ವಾಹನ ಮಾಲೀಕರು ತಮ್ಮ ವಾಹನವನ್ನು ಕಳ್ಳ ಸಾಗಾಣಿಕೆಗೆ ಯಾರು ಉಪಯೋಗ ಮಾಡಬಾರದು ಎಂದು ಮುನ್ನೆಚ್ಚರಿಕೆ ತೆಗೆದುಕೊಂಡಿರುವುದಿಲ್ಲವೆಂದು ಕಂಡು ಬಂದಿರುತ್ತದೆ. ಈ ವಾಹನ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಲು ಉಪಯೋಗ ಮಾಡಲಾಗಿತ್ತು. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದ್ದೇನೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ಶ್ರೀ ಶಿವರಾಜ್ ಸಿಂಗ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71 ಎ ರಿಂದ ಜಿ ಪ್ರಕಾರ ಅರಣ್ಯ ಅಪರಾಧ ಪ್ರಕರಣದಲ್ಲಿ ವಲಯ ಅರಣ್ಯಾಧಿಕಾರಿ ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಲಾರಿ ನಂ. ಸಿಐಯು 9192, ಚಾಸ್ಸಿ ನಂ. 344046824053, ಮತ್ತು ಶ್ರೀಗಂಧದ 160 ತುಂಡುಗಳು ಮತ್ತು 682 ಚಿಕ್ಕೆಗಳ ಒಟ್ಟು ತೂಕ 775 ಕೆ.ಜಿ.ಯನ್ನು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಿರುತ್ತೇನೆ. ಈ ಆದೇಶವನ್ನು ತೆರೆದ ನ್ಯಾಯಾಲಯದಲ್ಲಿ ಹೇಳಿ ಬರೆಯಿಸಿ ಗಣಕಯಂತ್ರದಲ್ಲಿ ಮುದ್ರಿಸಿ ನಂತರ ಸರಿಪಡಿಸಿ ದಿ: 25.10.2003 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ ದಿನಾಂಕದಿಂದ 30 (ಮೂವತ್ತು) ದಿನಗಳ ಒಳಗೆ ಯಾವುದೇ ಮೇಲ್ಮನವಿ ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶ ಎಂದು ಪರಿಗಣಿಸಲಾಗುವುದು.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ
ಸಾಗರ ವಿಭಾಗ, ಸಾಗರ

ಪಿ.ಆರ್. 1237

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ:80:ಡಿಟಿಸಿಆರ್:2001-02, ದಿನಾಂಕ: 28ನೇ ಅಕ್ಟೋಬರ್ 2003**

**ಉಪಸ್ಥಿತರು:** ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಪೊಲೀಸ್ ಉಪ ನಿರೀಕ್ಷಕರು,
ಬೆಳ್ತಂಗಡಿ ಪೊಲೀಸ್ ಠಾಣೆ, ಬೆಳ್ತಂಗಡಿ

**ವಿರುದ್ಧ**

**ಆರೋಪಿಗಳು**

1. ಎಸ್. ವೆಂಕಟೇಶ್ (ಪ್ರಾಯ 28 ವರ್ಷ)
ಬಿನ್ ಶ್ರೀನಿವಾಸ ಗೌಡ
ವಾಸ: ಡೋರ್ ನಂ. 18, ಬೃಂದಾವನ ನಗರ,
ಡೋಭಿ ಗಾಟ್, ರಸ್ತೆ 2ನೇ ಕ್ರಾಸ್,
ಚಾಮರಾಜಪೇಟೆ, ಬೆಂಗಳೂರು-19
2. ಶಿವಲಿಂಗ ಬಿನ್ ಚಂದ್ರೇಗೌಡ,
ವಾಸ: ಕೆ.ಎಂ. ದೊಡ್ಡಿ, ಮದ್ದೂರು ತಾಲ್ಲೂಕು
ಮಂಡ್ಯ ಜಿಲ್ಲೆ.
3. ಡಿ. ಚಂದ್ರಶೇಖರ ಬಿನ್ ದೊರೆಸ್ವಾಮಿ,
ವಾಸ: ನಂ. 25 ಲಕ್ಷ್ಮಿ ರೋಡ್,
ಶಾಂತಿನಗರ, ಬೆಂಗಳೂರು-27

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 28.8.2001 ರಂದು 22.30 ಗಂಟೆ ಸಮಯದಲ್ಲಿ ಪೊಲೀಸು ಉಪ ನಿರೀಕ್ಷಕರು ತಮ್ಮ ಸಿಬ್ಬಂದಿ ಸಮೇತ ಬೆಳ್ತಂಗಡಿ ತಾಲ್ಲೂಕು ಲೈಲಾ ಗ್ರಾಮದ ಕಾಶಿಬೆಟ್ಟು ಎಂಬಲ್ಲಿ ಚಾರ್ಮಾಡಿ ಕಡೆಯಿಂದ ಮಂಗಳೂರು ಕಡೆಗೆ ಯಾವುದೇ ರಹದಾರಿ ಇಲ್ಲದೇ ಅಕ್ರಮವಾಗಿ 3060.000 ಲೀಟರ್ ಮದ್ಯವನ್ನು ಲಾರಿ ಸಂ: ಎಪಿ-02ಟಿ-5769 ರಲ್ಲಿ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆ ಹಚ್ಚಿ ಇದು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 11ರ ರೀತ್ಯಾ ಉಲ್ಲಂಘನೆ ಹಾಗೂ ಕಲಂ 32, 34, 43ಎ ರ ರೀತ್ಯಾ ಶಿಕ್ಷಾರ್ಹವಾಗಿರುವುದರಿಂದ ಮೂವರು ಆರೋಪಿಗಳ ವಿರುದ್ಧ ಮೊಕದ್ದಮೆ ಸಂ: 109/2001, ದಿ: 28.8.2001 ರಂದು ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ. ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯ ಹಾಗೂ ಲಾರಿಯನ್ನು ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯ ಇವರಿಗೆ ಈ ಪ್ರಾಧಿಕಾರದ ಅನುಮತಿಯ ಮೇರೆಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯ ಇವರು ಪ್ರಕರಣದಲ್ಲಿ ವಶಪಡಿಸಿಕೊಂಡ ಮದ್ಯದಿಂದ ತೆಗೆದ ಮಾದರಿಯನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ ಅದರ ತೀಕ್ಷ್ಣತೆ ತಲಾ 42.80% ವಿದ್ದು 25 ಡಿಗ್ರಿ ಯು.ಪಿ. ಯಾಗಿದ್ದು ಇದು ಮಾನವನ ಸೇವನೆಗೆ ಯೋಗ್ಯವಾಗಿರುವುದರಿಂದ ವಶಪಡಿಸಿಕೊಂಡ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಪ್ರಸ್ತಾವನೆ ಮಾಡಿದ್ದು ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ: 80: ಡಿಟಿಸಿಆರ್: 2001-02 ದಿನಾಂಕ: 7.3.2003 ರಂತೆ ಸದ್ರಿ ಪ್ರಕರಣದಲ್ಲಿ ವಶಪಡಿಸಿಕೊಳ್ಳಲಾಗಿರುವ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇ ಮಾಡಲು ಆದೇಶ ಹೊರಡಿಸಲಾಗಿದೆ.

ಈ ಬಗ್ಗೆ ಪ್ರಕರಣದಲ್ಲಿ ವಶಪಡಿಸಿಕೊಳ್ಳಲಾಗಿರುವ ವಾಹನ ಸಂಖ್ಯೆ: ಎಪಿ-02ಟಿ-5769 ವಾಹನದ ಆರ್.ಸಿ. ಮಾಲೀಕರಾದ ಡಿ. ಚಂದ್ರಶೇಖರ್ ಬಿನ್ ದೊರೆಸ್ವಾಮಿ ಇವರ ಜಿ.ಪಿ.ಎ. ದಾರರು ಜಿ. ರಮೇಶ್ ಬಿನ್ ಗಂಗಾಧರಪ್ಪ ನಂ. 140, 2ನೇ ಮುಖ್ಯರಸ್ತೆ, 9ನೇ ಅಡ್ಡ ರಸ್ತೆ, ಚಾಮರಾಜಪೇಟೆ, ಬೆಂಗಳೂರುರವರು ದಿ: 22.10.2002 ರಂದು ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿ, ಸದರಿ ಮೊಕದ್ದಮೆಯನ್ನು ಇಲಾಖಾ ಮುಖಾಂತರ ಇತ್ಯರ್ಥಪಡಿಸಿ ವಾಹನವನ್ನು ಬಿಡುಗಡೆ ಮಾಡಲು ಕೋರಿದ್ದು ತದನಂತರ ಈವರೆಗೂ ಈ ಪ್ರಾಧಿಕಾರದ ಮುಂದೆ ಸೂಕ್ತ ದಾಖಲೆ ಪತ್ರಗಳನ್ನು ಹಾಜರುಪಡಿಸಿರುವುದಿಲ್ಲ. ಆದುದರಿಂದ ಸದ್ರಿಯವರ ಮನವಿಯನ್ನು ಪರಿಗಣಿಸಲು ಯೋಗ್ಯವಾಗದಿರುವುದರಿಂದ ಸದ್ರಿ ಅರ್ಜಿಯನ್ನು ಕೈಬಿಡಲಾಗಿದೆ.

ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯರವರ ಪತ್ರ ಸಂಖ್ಯೆ: ಬಿಎಲ್‌ಡಿ:ಆರ್‌ಸಿಆರ್:22:2002-03 ದಿ: 21.10.2003 ರಲ್ಲಿ ಸದರಿ ವಾಹನದ "ಬಿ" ಎಕ್ಸ್‌ಟ್ರಾಕ್ಸ್‌ವನ್ನು ತರಿಸಲು ಆರ್.ಟಿ.ಒ. ಅನಂತಪುರ ತಾಲ್ಲೂಕು ಆಂಧ್ರಪ್ರದೇಶರವರಿಗೆ ದಿ: 12.9.2001, ದಿ: 4.1.2003 ಮತ್ತು 16.9.2003 ರಲ್ಲಿ ಪತ್ರ ಬರೆಯಲಾಗಿದ್ದು ಇದುವರೆಗೂ ಯಾವುದೇ ಮಾಹಿತಿ ಲಭ್ಯವಾಗಿರುವುದಿಲ್ಲ. ಹಾಗೂ ಯಾವುದೇ ವ್ಯಕ್ತಿಯು ಈ ಕಛೇರಿಗೆ ವಾಹನವು ತನ್ನದೆಂದು ಸಂಪರ್ಕಿಸಿರುವುದಿಲ್ಲ. ಸದರಿ ವಾಹನವನ್ನು ವಶಪಡಿಸಿಕೊಂಡು ಸುಮಾರು 2 ವರ್ಷ ಬಯಲು ಪ್ರದೇಶದಲ್ಲಿದ್ದು ಬಿಸಿಲು ಮಳೆ ಗಾಳಿಗೆ ಹಾಳಾಗುವ ಸಂಭವವಿರುವುದರಿಂದ ಸರ್ಕಾರದ ಆರ್ಥಿಕ ಹಿತದೃಷ್ಟಿಯಿಂದ ಲಾರಿ ಸಂ: ಎಪಿ-02ಟಿ-5769 ವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲವಾದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸೊತ್ತುಗಳು ತಮ್ಮವೆಂದು ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರುಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸೊತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43 (ಸಿ) ಅಡಿಯಲ್ಲಿ ಅಕ್ರಮ ಮದ್ಯವನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಆದರೆ ಈ ಪ್ರಕರಣವು ದಾಖಲಾಗಿ ಸುಮಾರು ಎರಡು ವರ್ಷ ಎರಡು ತಿಂಗಳು ಕಳೆದಿದ್ದರೂ ಈವರೆಗೂ ಯಾವುದೇ ವ್ಯಕ್ತಿಯು ವಾಹನವು ತನ್ನದೆಂದು ವಾಹನದ ಬಿಡುಗಡೆಗೆ ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ ಮತ್ತು ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಅಲ್ಲದೇ ದಿ: 28.8.2001 ರಂದು ಬೆಳ್ತಂಗಡಿ ಪೊಲೀಸು ಉಪ ನಿರೀಕ್ಷಕರು, ಅಕ್ರಮವಾಗಿ ಸಾಗಾಣೆಯಾಗುತ್ತಿದ್ದ ಮದ್ಯವನ್ನು ಪತ್ತೆ ಹಚ್ಚಿ, ಮದ್ಯವನ್ನು ಮತ್ತು ವಾಹನವನ್ನು ಸ್ಥಳ ಮಹಜರಿನೊಂದಿಗೆ ಜಪ್ತಿ ಪಡಿಸಿರುತ್ತಾರೆ. ಅಲ್ಲದೇ ರಾಸಾಯನಿಕ ತಜ್ಞರ ವರದಿಯಂತೆ ಜಪ್ತಿ ಪಡಿಸಿರುವ ವಸ್ತು ಮದ್ಯವೆಂದು ದೃಢೀಕರಿಸಲ್ಪಟ್ಟಿರುತ್ತದೆ. ಈ ಮೇಲಿನ ವಿದ್ಯಾಮಾನಗಳಿಂದ ಮತ್ತು ಈ ಪ್ರಾಧಿಕಾರದ ಮುಂದೆ ಲಭ್ಯವಿರುವ ದಾಖಲೆ ಹಾಗೂ ಸಾಕ್ಷ್ಯಾಧಾರಗಳಿಂದ ಜಪ್ತಿಗೊಳಿಸಿರುವ ವಾಹನದಲ್ಲಿ ಅಕ್ರಮ ಮದ್ಯವು ಸಾಗಾಣಿಕೆಯಾಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗಿರುತ್ತದೆ.

ವಾಹನ ಮತ್ತು ಅಕ್ರಮ ಮದ್ಯವನ್ನು ಜಪ್ತುಪಡಿಸಿ ಎರಡು ವರ್ಷ ಎರಡು ತಿಂಗಳು ಮೀರಿದ್ದು ಈ ಸೊತ್ತುಗಳನ್ನು ತಮ್ಮದ್ದೆಂದು ಕೋರಿ ಯಾವೊಬ್ಬ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಈ ಕೃತ್ಯವು ವಾಹನ ಮಾಲೀಕನ ತಿಳುವಳಿಕೆಯಿಂದಲೇ ನಡೆದಿದೆ ಎಂದು ಭಾವಿಸಬಹುದಾಗಿದೆ. ಹಾಗೂ ಜಪ್ತುಪಡಿಸಲಾಗಿರುವ ವಾಹನವನ್ನು ತೆರೆದ ಜಾಗದಲ್ಲಿ ಇಟ್ಟಿರುವುದರಿಂದ ಮಳೆ ಬಿಸಿಲು, ಮುಂತಾದ ಹವಾಮಾನದ ವೈಪರೀತ್ಯದಿಂದ ಹಾಳಾಗುವ ಸಾಧ್ಯತೆಗಳು ಇರುವುದರಿಂದ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತ ಎಂದು ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಂಡು ಈ ಪ್ರಕರಣದಲ್ಲಿ ಜಪ್ತು ಪಡಿಸಿರುವ ವಾಹನ ಲಾರಿ ಸಂ: ಎಪಿ-02ಟಿ-5769 ನ್ನು ಕರ್ನಾಟಕ ಅಬಕಾರಿ ಕಾಯಿದೆ 43(ಸಿ) ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿ ಕಾಣಬರುವುದರಿಂದ ಈ ಕೆಳಕಂಡಂತೆ ಆದೇಶ.

**ಆದೇಶ**

ಎನ್.ಎಂ. ಹುಸೇನ್ ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43 (ಎ) ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43(ಬಿ) ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43(ಸಿ) ರನ್ವಯ ಪೊಲೀಸ್ ಉಪ ನಿರೀಕ್ಷಕರು, ಬೆಳ್ತಂಗಡಿ ಪೊಲೀಸ್ ಠಾಣೆ, ಬೆಳ್ತಂಗಡಿ ಇವರ ಮೊಕದ್ದಮೆ ಸಂಖ್ಯೆ: 109/2001 ದಿನಾಂಕ: 28.8.2001 ರಲ್ಲಿ ವಶಪಡಿಸಿಕೊಂಡಿರುವ ವಾಹನ ಲಾರಿ ಸಂ: ಎಪಿ-02ಟಿ-5769ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿ: 28.10.2003 ರಂದು ಶೀಘ್ರಲಿಪಿಗಾರರಿಗೆ ಉಖ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ
ಪಿ.ಆರ್. 1238 ಅಬಕಾರಿ ಅಧೀಕ್ಷಕರು,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ:249:ಡಿಟಿಸಿಆರ್:2002-03, ದಿನಾಂಕ: 28ನೇ ಅಕ್ಟೋಬರ್ 2003**

**ಉಪಸ್ಥಿತರು:** ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ವಿರುದ್ಧ** | **ಆರೋಪಿಗಳು** |
|---|---|---|
| ಅಬಕಾರಿ ಉಪ ನಿರೀಕ್ಷಕರು,<br>ಬಂಟ್ವಾಳ ಉಪ ವಿಭಾಗ, ಬಂಟ್ವಾಳ. | | ಆರೋಪಿಗಳು ಪರಾರಿಯಾಗಿರುತ್ತಾರೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 12.9.2002 ರಂದು ಅಬಕಾರಿ ಉಪ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳರವರು 17.30 ಗಂಟೆ ಸಮಯದಲ್ಲಿ ತಮ್ಮ ಸಿಬ್ಬಂದಿ ಸಮೇತ ಬಂಟ್ವಾಳ ತಾಲ್ಲೂಕು ಪಾಣೆಮಂಗಳೂರು ಗ್ರಾಮದ ಮೆಲ್ಕಾರು ಎಂಬಲ್ಲಿ ರಾಷ್ಟ್ರೀಯ ಹೆದ್ದಾರಿ 48 ರ ಬದಿಯಲ್ಲಿ ಅಕ್ರಮವಾಗಿ ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೇ ಅಂಬಾಸಿಡರ್ ಕಾರು ಸಂ: ಸಿಟಿಎ-5970 ರಲ್ಲಿ ಆರೋಪಿಯು ಅಕ್ರಮವಾಗಿ 131.760 ಲೀಟರು ಫೆನ್ನಿಯನ್ನು ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆ ಹಚ್ಚಿ ಇದು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 12, 14 ರೀತ್ಯಾ ಅಪರಾಧ ಹಾಗೂ ಕಲಂ 32, 34 ಮತ್ತು 38(ಎ) ರ ರೀತ್ಯಾ ಶಿಕ್ಷಾರ್ಹವಾಗಿರುವುದರಿಂದ ಸದರಿ ಆರೋಪಿಯ ವಿರುದ್ಧ ಮೊಕದ್ದಮೆ ಸಂ: 4/2002-03 ದಿ: 12.9.2002 ರಂದು ಮೊಕದ್ದಮೆಯನ್ನು ದಾಖಲೆ ಮಾಡಿರುತ್ತಾರೆ. ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಫೆನ್ನಿ ಹಾಗೂ ವಾಹನವನ್ನು ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರಿಗೆ ಈ ಪ್ರಾಧಿಕಾರದ ಅನುಮತಿಯ ಮೇರೆಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರು ಪ್ರಕರಣದಲ್ಲಿ ವಶಪಡಿಸಿಕೊಂಡ ಫೆನ್ನಿಯಿಂದ ತೆಗೆದ ಮಾದರಿಯನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ ಅದರ ತೀಕ್ಷ್ಣತೆ ತಲಾ 42.80% ವಿದ್ದು 25 ಡಿಗ್ರಿ ಯು.ಪಿ. ಯಾಗಿದ್ದು ಇದು ಮಾನವನ ಸೇವನೆಗೆ ಯೋಗ್ಯವಾಗಿರುವುದರಿಂದ ವಶಪಡಿಸಿಕೊಂಡ ಫೆನ್ನಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ:249:ಡಿಟಿಸಿಆರ್: 2002-03, ದಿನಾಂಕ: 22.1.2003 ರಂದು ಸದ್ರಿ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇಮಾಡಲು ಆದೇಶ ಹೊರಡಿಸಲಾಗಿದೆ.

ಅಬಕಾರಿ ನಿರೀಕ್ಷಕರು ಬಂಟ್ವಾಳ ವಲಯರವರ ಪತ್ರ ಸಂಖ್ಯೆ: ಬಿಎಸ್‌ಆರ್:ಆರ್‌ಸಿಆರ್: 11:2002-03, ದಿ: 8.8.2003 ರಲ್ಲಿ ಸದರಿ ವಾಹನದ "ಬಿ" ಎಕ್ಸ್‌ಟ್ರಾಕ್ಸ್‌ವನ್ನು ತರಿಸಲು ಆರ್.ಟಿ.ಓ. ಮೈಸೂರು ವಿಭಾಗ, ಮೈಸೂರುರವರಿಗೆ ದಿ: 12.11.2002 ಮತ್ತು ದಿ: 11.2.2003 ರಲ್ಲಿ ನೆನಪೋಲೆಯನ್ನು ನೋಂದಣಿ ಅಂಚೆಯ ಮೂಲಕ ಕಳುಹಿಸಲಾಗಿದ್ದು ಸ್ವೀಕೃತಿ ರಶೀದಿ ದಿ: 19.2.2003 ರಂದು ಈ ಕಛೇರಿಗೆ ತಲುಪಿರುತ್ತದೆ. ಆದರೆ ಇದುವರೆಗೂ ಸಾರಿಗೆ ಅಧಿಕಾರಿಗಳಿಂದ ಯಾವುದೇ ಮಾಹಿತಿ ಲಭ್ಯವಾಗಿರುವುದಿಲ್ಲ. ಹಾಗೂ ಯಾವುದೇ ವ್ಯಕ್ತಿಯು ಈ ಕಛೇರಿಗೆ ವಾಹನವು ತನ್ನದೆಂದು ಸಂಪರ್ಕಿಸಿರುವುದಿಲ್ಲ. ಸದರಿ ವಾಹನವನ್ನು ವಶಪಡಿಸಿಕೊಂಡು ಸುಮಾರು 1 ವರ್ಷ ಬಯಲು ಪ್ರದೇಶದಲ್ಲಿದ್ದು ಬಿಸಿಲು ಮಳೆ ಗಾಳಿಗೆ ಹಾಳಾಗುವ ಸಂಭವವಿರುವುದರಿಂದ ಸರ್ಕಾರದ ಆರ್ಥಿಕ ಹಿತದೃಷ್ಟಿಯಿಂದ ಅಂಬಾಸಿಡರ್ ಕಾರು ಸಂ: ಸಿಟಿಎ-5970 ವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಕರಣವು ದಾಖಲಾಗಿ ಸುಮಾರು 1 ವರ್ಷ 1 ತಿಂಗಳು ಕಳೆದಿದ್ದರೂ ಜಪ್ತಿ ಪಡಿಸಿರುವ ವಾಹನ ತನ್ನದೆಂದು ಕೋರಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ದಾಖಲಾತಿಗಳೊಂದಿಗೆ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಮತ್ತು ಪ್ರಕರಣವು ದಾಖಲಿಸುವ ಸಂದರ್ಭದಲ್ಲಿ ಆರೋಪಿಗಳು ಪರಾರಿಯಾಗಿರುತ್ತಾರೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲವಾದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸೊತ್ತುಗಳು ತಮ್ಮವೆಂದು ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರುಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ

ಸೊತ್ತುಗಳಾಗಿದ್ದಲ್ಲಿ, ಅಂತಹ ವಸ್ತುಗಳನ್ನು ಕಲಂ 43(ಸಿ) ಅಡಿಯಲ್ಲಿ ಅಕ್ರಮ ಮದ್ಯವನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಅಲ್ಲದೇ ದಿ: 12.9.2002 ರಂದು ಬಂಟ್ವಾಳ ಉಪ ವಿಭಾಗದ ಅಬಕಾರಿ ನಿರೀಕ್ಷಕರು ಬಂಟ್ವಾಳದ ಪಾಣೆ ಮಂಗಳೂರು ನಗರದ ಮೆಲ್ಕಾರು ಎಂಬಲ್ಲಿ ಅಕ್ರಮವಾಗಿ ಸಾಗಾಣೆಯಾಗುತ್ತಿದ್ದ 131.760 ಲೀಟರು ಫೆನ್ನಿಯನ್ನು ಪತ್ತೆ ಹಚ್ಚಿ, ಫೆನ್ನಿ ಮತ್ತು ವಾಹನವನ್ನು ಸ್ಥಳ ಮಹಜರಿನೊಂದಿಗೆ ಜಪ್ತಿ ಪಡಿಸಿರುತ್ತಾರೆ. ಅಲ್ಲದೇ ರಾಸಾಯನಿಕ ತಜ್ಞರ ವರದಿಯಂತೆ ಜಪ್ತಿ ಪಡಿಸಿರುವ ವಸ್ತು ಫೆನ್ನಿಯೆಂದು ದೃಢೀಕರಿಸಲ್ಪಟ್ಟಿರುತ್ತದೆ. ಈ ಮೇಲಿನ ವಿದ್ಯಾಮಾನಗಳಿಂದ ಮತ್ತು ಈ ಪ್ರಾಧಿಕಾರದ ಮುಂದೆ ಲಭ್ಯವಿರುವ ದಾಖಲೆ ಹಾಗೂ ಸಾಕ್ಷ್ಯಾಧಾರಗಳಿಂದ ಜಪ್ತಿಗೊಳಿಸಿರುವ ವಾಹನದಲ್ಲಿ ಅಕ್ರಮ ಫೆನ್ನಿಯು ಸಾಗಾಣಿಕೆಯಾಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಭೀತಾಗಿರುತ್ತದೆ.

ಈ ಮೇಲಿನ ಅಂಶಗಳಿಂದ ಹಾಗೂ ದಾಖಲಾತಿಗಳ ಆಧಾರದಿಂದ ದಿ: 12.9.2002 ರಂದು ಅಂಬಾಸಿಡರ್ ಕಾರು ಸಂ: ಸಿಟಿಎ-5970 ರಲ್ಲಿ ಅಕ್ರಮ ಫೆನ್ನಿಯು ಸಾಗಾಣಿಕೆಯಾಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಭೀತಾಗಿರುತ್ತದೆ. ಸದರಿ ಪ್ರಕರಣವು ದಾಖಲೆಗೊಂಡು ಸುಮಾರು 1 ವರ್ಷ 1 ತಿಂಗಳು ಕಳೆದರೂ ಯಾವುದೇ ವ್ಯಕ್ತಿಯು ವಾಹನವನ್ನು ತನ್ನದೆಂದು ಕೋರಿ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದು ವಾಹನ ಮಾಲೀಕನು ತಾನು ತನ್ನ ತಿಳಿವಳಿಕೆಯಿಂದಲೇ ಈ ಅಕ್ರಮ ಕೃತ್ಯವು ನಡೆದಿದೆಯೆಂದು ಮತ್ತು ಈ ಪ್ರಕರಣವನ್ನು ನಡೆಸಲು ವಾಹನ ಮಾಲೀಕರಿಗೆ ಉತ್ಸಾಹವಿರುವುದಿಲ್ಲವೆಂದು ಈ ಪ್ರಾಧಿಕಾರವು ಭಾವಿಸಬೇಕಾಗುತ್ತದೆ.

ಈ ಮೇಲಿನ ಕಾರಣಗಳಿಂದಾಗಿ ಹಾಗೂ ಜಪ್ತು ಪಡಿಸಲಾಗಿರುವ ವಾಹನವನ್ನು ತೆರೆದ ಜಾಗದಲ್ಲಿ ಇಟ್ಟಿರುವುದರಿಂದ ಮಳೆ, ಬಿಸಿಲು ಮುಂತಾದ ಹವಾಮಾನ ವೈಪರೀತ್ಯದಿಂದ ಹಾಳಾಗುವ ಸಾಧ್ಯತೆಗಳು ಇರುವುದರಿಂದ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತ ಎಂದು ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಂಡು ಈ ಪ್ರಕರಣದಲ್ಲಿ ಜಪ್ತು ಪಡಿಸಿರುವ ವಾಹನ ಅಂಬಾಸಿಡರ್ ಕಾರು ಸಂ: ಸಿಟಿಎ-5970 ನ್ನು ಕರ್ನಾಟಕ ಅಬಕಾರಿ ಕಾಯಿದೆ 43(ಸಿ) ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿ ಕಾಣಬರುವುದರಿಂದ ಈ ಕೆಳಕಂಡಂತೆ ಆದೇಶ.

**ಆದೇಶ**

ಎನ್.ಎಂ. ಹುಸೇನ್ ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43 (ಎ) ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43(ಬಿ) ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43(ಸಿ) ರನ್ವಯ ಅಬಕಾರಿ ಉಪ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರ ಮೊಕದ್ದಮೆ ಸಂಖ್ಯೆ: 4/2002-03 ದಿನಾಂಕ: 12.9.2002 ರಲ್ಲಿ ವಶಪಡಿಸಿಕೊಂಡಿರುವ ವಾಹನ ಅಂಬಾಸಿಡರ್ ಕಾರು ಸಂ: ಸಿಟಿಎ-5970 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿ: 28.10.2003 ರಂದು ಶೀಘ್ರಲಿಪಿಗಾರರಿಗೆ ಉಖ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಅಧೀಕ್ಷಕರು,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 1239

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ:813:ಡಿಟಿಸಿಆರ್:1997-1998**

**ಉಪಸ್ಥಿತರು:** ಗೋವಿಂದಪ್ಪ,
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಅಬಕಾರಿ ನಿರೀಕ್ಷಕರು,
ಅಬಕಾರಿ ಗುಪ್ತವಾರ್ತಾದಳ,
ಮಂಗಳೂರು ವಿಭಾಗ, ಮಂಗಳೂರು.

**ವಿರುದ್ಧ**

**ಆರೋಪಿಗಳು**
1. ಎಂ. ಸೋಮಶೇಖರ್ (30 ವರ್ಷ)
   ಬಿನ್ ಚೆನ್ನಪ್ಪ ವಯಸ್ಸು ಕೊಠಡಿ ಸಂಖ್ಯೆ: 88
   ರೈಲ್ವೆ ಕಾಲೋನಿ, ಮಂಗಳೂರು.
2. ಉದಯ ಅಂಚನ್, ಬಿನ್ ರುಕ್ಷಯ್ಯ ಪೂಜಾರಿ
   ಪೂಜಾರಿ ನಿಲಯ, ಸೂರಿ ಕುಮೆರು,
   ಬಾರಿಮಾರು ಅಂಚೆ, ಬಂಟ್ವಾಳ ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 27.6.1998 ರಂದು ಸಾಯಂಕಾಲ 5.00 ಗಂಟೆ ಮಂಗಳೂರು ಗುಪ್ತ ವಾರ್ತಾದಳದ ಅಬಕಾರಿ ನಿರೀಕ್ಷಕರು, ಮಂಗಳೂರು ಉಪ ವಿಭಾಗದ ಅಬಕಾರಿ ಉಪ ಅಧೀಕ್ಷಕರೊಂದಿಗೆ ಖಚಿತ ವರ್ತಮಾನದ ಮೇರೆಗೆ ನಂತೂರು ಕ್ರಾಸ್ ಬಳಿ ರಸ್ತೆಗಾವಲು ನಡೆಸುತ್ತಿದ್ದಾಗ ರಾಷ್ಟ್ರೀಯ ಹೆದ್ದಾರಿಯಲ್ಲಿ ಕರ್ನಾಟಕ ಪಾಲಿಟೆಕ್ನಿಕ್ ಕಡೆಯಿಂದ ಒಂದು ನೀಲಿ ಬಣ್ಣದ ಕಾರು ಬರುತ್ತಿದ್ದು ನಿಲ್ಲಿಸಲು ಸೂಚನೆ ನೀಡಿದಾಗ ಅದು ನಿಲ್ಲದೇ ಮೂಡಬಿದ್ರೆ ರಸ್ತೆಗೆ ತಿರುಗಿಸಲು ನಂತೂರು ಕ್ರಾಸ್‌ನಿಂದ 200 ಮೀಟರು ದೂರದಲ್ಲಿದ್ದಾಗ ಕಾರನ್ನು ತಡೆದು

ನಿಲ್ಲಿಸಿದಾಗ ಕಾರಿನಲ್ಲಿ ಇಬ್ಬರು ವ್ಯಕ್ತಿಗಳಿದ್ದು ಕಾರನ್ನು ಪರಿಶೀಲನೆ ಮಾಡಲಾಗಿ ಕಾರಿನ ಹಿಂಭಾಗದ ಸೀಟಿನ ಮೇಲೆ ಮತ್ತು ಸೀಟಿನ ಮುಂಭಾಗದಲ್ಲಿ ರಟ್ಟಿನ ಪೆಟ್ಟಿಗೆಗಳು ಇರುವುದು ಕಂಡುಬಂತು. ಚಾಲಕನನ್ನು ವಿಚಾರಿಸಲಾಗಿ ಆತನು ಅವು ಮದ್ಯದ ಬಾಟ್ಲಿಗಳೆಂದು ತಿಳಿಸಿದ್ದು ಅವುಗಳನ್ನು ಸಾಗಣೆ ಮಾಡಲು ಯಾವುದೇ ರೀತಿಯ ರಹದಾರಿ ಇರುವುದಿಲ್ಲವೆಂದು ಚಾಲಕನು ಮತ್ತು ಇನ್ನೊಬ್ಬ ವ್ಯಕ್ತಿಯು ತಿಳಿಸಿರುತ್ತಾರೆ. ಮುಂದಿನ ಕ್ರಮ ಜರುಗಿಸಲು ಪಂಚರಾಗಿ ಯಾರು ಬಾರದೆ ಇದ್ದ ಕಾರಣ ಇಲಾಖೆಯವರನ್ನೇ ಪಂಚರನ್ನಾಗಿಸಿ ರಟ್ಟಿನ ಪೆಟ್ಟಿಗೆಗಳನ್ನು ಪರಿಶೀಲಿಸಲಾಗಿ 24 ಪೆಟ್ಟಿಗೆಗಳಲ್ಲಿ ತಲಾ 180 ಮಿಲಿಯ 48 ಬಾಟ್ಲಿಗಳಂತೆ ಒಟ್ಟು 1152 ಬಾಟ್ಲಿಗಳಿರುವುದು ಕಂಡು ಬಂದಿದ್ದು ಅವುಗಳ ಮೇಲೆ ಬಾಸ್ ವಿಸ್ಕಿ ಎಂದು ಮೆ: ಗ್ರೀನ್‌ಫೀಲ್ಡ್ ಡಿಸ್ಟಿಲರೀಸ್‌ನಲ್ಲಿ ತಯಾರಿಸಿರುವುದಾಗಿ ನಮೂದಾಗಿರುತ್ತದೆ. ಸದ್ರಿ ಕಾರಿನಲ್ಲಿದ್ದ ವ್ಯಕ್ತಿಗಳ ಹೆಸರು ಮತ್ತು ವಿಳಾಸವನ್ನು ಕೇಳಲು ಕಾರಿನ ಚಾಲಕನು ತನ್ನ ಹೆಸರು ಎಂ. ಸೋಮಶೇಖರ ಬಿನ್ ಚೆನ್ನಪ್ಪ ವಯಸ್ಸು 30 ವರ್ಷ ಕೊಠಡಿ ಸಂಖ್ಯೆ: 88 ರೈಲ್ವೆ ಕಾಲೋನಿ, ಮಂಗಳೂರು ಎಂದೂ ಇನ್ನೊಬ್ಬ ವ್ಯಕ್ತಿಯು ತನ್ನ ಹೆಸರು ಉದಯ ಅಂಚನ್ ಬಿನ್ ರುಕ್ಷಯ್ಯ ಪೂಜಾರಿ ವಯಸ್ಸು 21, ಪೂಜಾರಿ ನಿಲಯ, ಬರಿಮಾರು ಅಂಚೆ, ಬಂಟ್ವಾಳ ತಾಲ್ಲೂಕು ಎಂದೂ ತಿಳಿಸಿರುತ್ತಾರೆ. ಅಲ್ಲದೇ ತಾನೇ ಕಾರಿನ ಮಾಲೀಕನೆಂದು ಮದ್ಯವನ್ನು ತಾನೇ ಸಾಗಾಟ ಮಾಡುತ್ತಿರುವುದಾಗಿ ತಿಳಿಸಿರುತ್ತಾರೆ. ಅಧಿಕಾರಿಗಳು ಇದು ಅಕ್ರಮ ಸಾಗಣೆಯೆಂದು ತಿಳಿಸಿ ರಾಸಾಯನಿಕ ಪರೀಕ್ಷೆಗೆಂದು ಪ್ರತಿಯೊಂದು ಪೆಟ್ಟಿಗೆಯಿಂದ ತಲಾ 1 ಬಾಟ್ಲಿಯಂತೆ ಮಾದರಿ ತೆಗೆದು ಬಾಟ್ಲಿಗಳಿಗೆ ಬಟ್ಟೆ ದಾರ ಕಟ್ಟಿ ಇಲಾಖೆಯ ಸೀಲಿನಿಂದ ಸೀಲು ಮಾಡಲಾಗಿರುತ್ತದೆ ಮತ್ತು ಬಾಟ್ಲಿಗಳಿಗೆ ಪಂಚರ ಸಹಿಯಿದ್ದ ಚೀಟಿಗಳನ್ನು ಅಂಟಿಸಲಾಯಿತು. ಕಾರಿನಲ್ಲಿ ಶೋಧನೆ ಸಮಯ ಕಾರಿನ ಆರ್.ಸಿ. ಪುಸ್ತಕದ ಜೆರಾಕ್ಸ್ ಪ್ರತಿಯು ದೊರೆತಿದ್ದು ಕಾರಿನ ನೋಂದಣಿ ಸಂಖ್ಯೆ: ಸಿಆರ್‌ಎಕ್ಸ್: 3087 ಎಂದೂ ಇಂಜಿನ್ ಸಂಖ್ಯೆ: 353897, ಚಾಸಿ ಸಂಖ್ಯೆ: 258397 ಎಂದು ಇರುತ್ತದೆ. ಈ ರೀತಿ ಯಾವುದೇ ರಹದಾರಿಯಿಲ್ಲದೆ ಮದ್ಯಸಾಗಣೆ ಮಾಡುವುದು ಅಬಕಾರಿ ಕಾನೂನಿಗೆ ವಿರುದ್ಧವಾಗಿದ್ದು ಹಾಜರಿದ್ದ ಆರೋಪಿಗಳನ್ನು ದಸ್ತಗಿರಿ ಮಾಡಿ ಕಾರನ್ನು ಕಾರಿನಲ್ಲಿದ್ದ ಮದ್ಯವನ್ನು ಜಪ್ತುಗೊಳಿಸಿ ಸ್ಥಳದಲ್ಲಿಯೇ ಮಹಜರನ್ನು ಮತ್ತು ಸರ್ಚ್ ಲಿಸ್ಟನ್ನು ತಯಾರಿಸಿ ಮೊಕದ್ದಮೆಯನ್ನು ಮೊಕದ್ದಮೆ ಸಂಖ್ಯೆ: 18/97-98, ದಿ: 27.6.98 ಮೂಲಕ ದಾಖಲುಪಡಿಸಲಾಗಿರುತ್ತದೆ. ಪ್ರಥಮ ಮಾಹಿತಿ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೂ ಮತ್ತು ಪ್ರಥಮ ಮಾಹಿತಿ ವರದಿ ಹಾಗೂ ಅಬಕಾರಿ ಕಾಯ್ದೆ ಕಲಂ 43(ಎ) ರ ಪ್ರಕಾರ ವರದಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿ ಪ್ರಕರಣದಲ್ಲಿ ಜಪ್ತುಗೊಳಿಸಲಾದ ವಸ್ತುಗಳನ್ನು ತಮ್ಮ ಸುಪರ್ಧ ಇಟ್ಟುಕೊಂಡು ಕುಲಶೇಖರ ವಲಯ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿಯನ್ನು ಪಡೆದು ಪ್ರಕರಣವನ್ನು ಹಸ್ತಾಂತರಿಸಿರುತ್ತಾರೆ.

ದಿನಾಂಕ: 18.8.98 ರಂದು ಈ ಪ್ರಾಧಿಕಾರವು ಕಾರಣ ಕೇಳಿ ನೋಟೀಸು ನೀಡಿದ್ದು ಕಾರಣ ಕೇಳಿ ನೀಡಲಾಗಿದ್ದ ನೋಟೀಸಿಗೆ ಉತ್ತರವನ್ನು ದಿ: 5.9.1998 ರಂದು ನೀಡಿರುತ್ತಾರೆ. ದಿನಾಂಕ: 24.7.98 ರಂದು ಜಪ್ತು ಪಡಿಸಲಾದ ವಾಹನವನ್ನು ತಾತ್ಕಾಲಿಕ ಬಿಡುಗಡೆಗೆ ತಮ್ಮ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿದ್ದು ದಿನಾಂಕ: 7.9.98 ರಂದು ಮತ್ತೊಂದು ಅರ್ಜಿಯನ್ನು ಸಲ್ಲಿಸಿ ತತ್ಕಾಲಿಕ ಬಿಡುಗಡೆಗೊಳಿಸದಿದ್ದಲ್ಲಿ ರಾಜ್ಯ ಉಚ್ಚ ನ್ಯಾಯಾಲಯಕ್ಕೆ ಮನವಿ ಸಲ್ಲಿಸಲಾಗುವುದು ಎಂದು ತಿಳಿಸಿ ರಾಜ್ಯ ಉಚ್ಚ ನ್ಯಾಯಾಲಯಕ್ಕೆ ಮನವಿ ಸಲ್ಲಿಸಿದ್ದು ಉಚ್ಚ ನ್ಯಾಯಾಲಯವು ಮನವಿಯನ್ನು ಮುಕ್ತಾಯಗೊಳಿಸಿ ತಾತ್ಕಾಲಿಕ ಬಿಡುಗಡೆಗೆ 4 ವಾರಗಳ ಗಡವು ನೀಡಿರುತ್ತದೆ. ದಿನಾಂಕ: 24.7.98 ರಂದು ಅರ್ಜಿದಾರರು ಸಲ್ಲಿಸಿದ್ದ ತಾತ್ಕಾಲಿಕ ಬಿಡುಗಡೆ ಅರ್ಜಿಯನ್ನು ಪ್ರಾಧಿಕಾರವು ದಿ: 11.2.99 ರಂದು ತಿರಸ್ಕರಿಸಿರುತ್ತದೆ. ಸದ್ರಿ ತಿರಸ್ಕೃತ ಆದೇಶದ ಬಗ್ಗೆ ಅತೃಪ್ತಿಗೊಂಡ ಅರ್ಜಿದಾರರು ಮಾನ್ಯ ಜಿಲ್ಲಾ ಸೆಕ್ಷನ್ ಕೋರ್ಟಿಗೆ ಮೇಲ್ಮನವಿ ಸಲ್ಲಿಸಿದ್ದು ಮಾನ್ಯ ಜಿಲ್ಲಾ ಸತ್ರ ನ್ಯಾಯಾಲಯವು ದಿ: 9.4.99 ರಂದು ವಾಹನದ ಮೌಲ್ಯಕ್ಕೆ ಬ್ಯಾಂಕ್ ಗ್ಯಾರಂಟಿ ಹಾಗೂ ಅಷ್ಟೇ ಮೊತ್ತದ ಇಂಡೆಮ್ನಿಟಿ ಬಾಂಡನ್ನು ಪಡೆದು ತಾತ್ಕಾಲಿಕ ಬಿಡುಗಡೆಗೆ ಆದೇಶ ನೀಡಿದ್ದು ಅದರಂತೆ ಪ್ರಾಧಿಕಾರವು ದಿನಾಂಕ: 16.7.99 ರಂದು ರೂ. 26800/- ಬ್ಯಾಂಕ್ ಗ್ಯಾರೆಂಟಿ ಅಷ್ಟೇ ಮೊತ್ತದ ಇಂಡೆಮ್ನಿಟಿ ಬಾಂಡನ್ನು ಪಡೆದು ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆ ಮಾಡಿರುತ್ತದೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ ಸರ್ಕಾರದ ಅಭಿಯೋಜನೆಯ ಪರ ನಾಲ್ಕು ಸಾಕ್ಷಿಗಳನ್ನು ಮತ್ತು ಪ್ರತಿರಕ್ಷಾ ಪರ ಒಂದು ಸಾಕ್ಷಿಯನ್ನು ವಿಚಾರಣೆಗೆ ಒಳಪಡಿಸಿ ಅವರುಗಳ ಹೇಳಿಕೆಯನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಸರ್ಕಾರದ ಪರ ಹಾಗೂ ವಾಹನ ಮಾಲೀಕರ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತವೆ.

1. ದಿನಾಂಕ: 27.6.98 ರಂದು ವಾಹನ ಮಾರುತಿ ಕಾರು ಸಂ: ಸಿಆರ್‌ಎಕ್ಸ್-3087 ರಲ್ಲಿ ಅಕ್ರಮ ಮದ್ಯ ಸಾಗಣೆ ಮಾಡಲಾಗಿತ್ತೇ?
2. ಅರ್ಜಿದಾರರು ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು ತನಗೆ ತಿಳಿಯದೇ ಅಕ್ರಮ ಮದ್ಯ ಸಾಗಾಣೆಗೆ ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತುಪಡಿಸಿದ್ದಾರೆಯೇ?
3. ಜಪ್ತು ಪಡಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷಿ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸುತ್ತೇನೆ.

1. ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದೂ, ಎರಡನೇ ಅಂಶವನ್ನು ನಕರಾತ್ಮಕವಾಗಿ ಇಲ್ಲ ಎಂದೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ.-1:**

ಆರ್.ಜೆ. ಜ್ವಾಲಣ್ಣ, ಅಬಕಾರಿ ನಿರೀಕ್ಷಕರು, ಮಂಗಳೂರು ಗುಪ್ತವಾರ್ತಾದಳ, ಮಂಗಳೂರು ಇವರು ಈ ಪ್ರಕರಣದ ಫಿರ್ಯಾದುದಾರರಾಗಿದ್ದು ದಿನಾಂಕ: 7.12.2000 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿರುತ್ತಾರೆ. ದಿ: 27.6.98 ರಂದು ಸಾಯಂಕಾಲ ಸಿಬ್ಬಂದಿ ಸಮೇತ ರಾಷ್ಟ್ರೀಯ ಹೆದ್ದಾರಿ 17 ರಲ್ಲಿ ನಂತೂರು ಕ್ರಾಸ್ ಬಳಿ ರಸ್ತೆಗಾವಲು ನಡೆಸುತ್ತಿದ್ದಾಗ ಕರ್ನಾಟಕ ಪಾಲಿಟೆಕ್ನಿಕ್ ಕಡೆಯಿಂದ ಬಂದ ನೀಲಿ ಬಣ್ಣದ ಮಾರುತಿ ಕಾರು ನಿಲ್ಲಿಸಲು ಸೂಚನೆ ನೀಡಿದಾಗ ಅದು ನಿಲ್ಲದೆ ಮುಂದೆ ಹೋಗಲು ಇಲಾಖಾ ಜೀಪಿನಲ್ಲಿ ಬೆನ್ನಟ್ಟಿ ನಂತೂರು ಕ್ರಾಸ್ ಕುಲಶೇಖರ ಕಡೆ ಹೋಗುವ ಮಾರ್ಗದಲ್ಲಿ ನಿಲ್ಲಿಸಿದ್ದು ಕಾರಿನಲ್ಲಿ ಚಾಲಕನಲ್ಲದೆ

ಇನ್ನೋರ್ವ ವ್ಯಕ್ತಿಯು ಕುಳಿತಿದ್ದು ಕಾರಿನ ಹಿಂದಿನ ಸೀಟಿನಲ್ಲಿ ಮತ್ತು ಸೀಟಿನ ಮುಂಭಾಗದಲ್ಲಿ ರಟ್ಟಿನ ಪೆಟ್ಟಿಗೆಗಳು ಇರುವುದು ಕಂಡುಬಂತು, ವಿಚಾರಿಸಲಾಗಿ ಮದ್ಯ ತುಂಬಿದ ಪೆಟ್ಟಿಗೆಗಳೆಂದು ತಿಳಿಸಿದ್ದು ಆ ಬಗ್ಗೆ ರಹದಾರಿಯನ್ನು ಕೇಳಲಾಗಿ ತಮ್ಮಲ್ಲಿ ಯಾವುದೇ ವಿಧವಾದ ರಹದಾರಿ ಇಲ್ಲವೆಂದು ತಿಳಿಸಿದ್ದು ಈ ರೀತಿ ರಹದಾರಿಯಿಲ್ಲದೆ ಮದ್ಯ ಸಾಗಣೆ ಮಾಡುವುದು ಅಬಕಾರಿ ಕಾನೂನಿನ ಉಲ್ಲಂಘನೆಯೆಂದು ತಿಳಿಸಿ ಮುಂದಿನ ಕ್ರಮ ಕೈಗೊಳ್ಳಲು ಸ್ಥಳದಲ್ಲಿ ಪಂಚರು ಸಿಗದೇ ಇದ್ದ ಕಾರಣ ಇಲಾಖೆಯವರನ್ನೇ ಪಂಚರನ್ನಾಗಿಸಿಕೊಂಡು ಕಾರಿನಲ್ಲಿದ್ದ ರಟ್ಟಿನ ಪೆಟ್ಟಿಗೆಗಳನ್ನು ಪರಿಶೀಲಿಸಲಾಗಿ 24 ಪೆಟ್ಟಿಗೆಗಳಲ್ಲಿ ತಲಾ 180 ಮಿಲಿಯ 48 ಬಾಟ್ಲಿಗಳಿದ್ದು ಸದ್ರಿ ಬಾಟ್ಲಿಗಳ ಮೇಲೆ ಅವುಗಳನ್ನು ತಯಾರಿಸಿದ ಡಿಸ್ಟಿಲರಿ ಹೆಸರು, ಮದ್ಯದ ಪ್ರಮಾಣ ಮತ್ತು ಇತರೆ ವಿವರಗಳುಳ್ಳ ಚೀಟಿಗಳಿದ್ದವು ಎಂದು ತಿಳಿಸಿರುತ್ತಾರೆ. ರಾಸಾಯನಿಕ ಪರೀಕ್ಷೆಯ ಸಲುವಾಗಿ ಪ್ರತಿ ಪೆಟ್ಟಿಗೆಯಿಂದ ಒಂದೊಂದು ಬಾಟ್ಲಿಯನ್ನು ಮಾದರಿಯಾಗಿ ತೆಗೆದು ಇಲಾಖಾ ಸೀಲಿನಿಂದ ಸೀಲು ಮಾಡಲಾಯಿತು. ಹಾಜರಿದ್ದ ಚಾಲಕನ ಹೆಸರು ಕೇಳಲಾಗಿ ಆತನು ಸೋಮೇಶ್ವರ ಮತ್ತು ಮತ್ತೋರ್ವ ಉದಯ ಅಂಚನ್ ಎಂದು ಆತನು ಕಾರಿನ ಮಾಲೀಕನೆಂದು ತಿಳಿಸಿರುತ್ತಾನೆಂದು ಸದ್ರಿ ದಿನದಂದು ನ್ಯಾಯಾಲಯದ ಮುಂದೆ ಹಾಜರಾಗಿರುವ ವ್ಯಕ್ತಿ ಉದಯ ಅಂಚನ್ ಎಂದು ಗುರುತಿಸಿರುತ್ತಾರೆ. ನಂತರ ಸ್ಥಳ ಮಹಜರನ್ನು ತಯಾರಿಸಿ ಹಾಜರಿದ್ದ ಅಪರಾಧಿಗಳನ್ನು ದಸ್ತಗಿರಿ ಮಾಡಿ ಕಾರನ್ನು ಮತ್ತು ಮದ್ಯವನ್ನು ಇಲಾಖೆಗೆ ವಶಪಡಿಸಿಕೊಂಡಿರುವುದಾಗಿ ತಿಳಿಸಿರುತ್ತಾರೆ. ಮಹಜರನ್ನು ನೋಡಿದ್ದು ಅದನ್ನು ನಿಶಾನೆ ಪಿ-1 ಎಂದು ಅದರ ಮೇಲಿನ ಸಹಿಯನ್ನು ನಿಶಾನೆ ಪಿ-1ಎ ಎಂದು ಗುರುತಿಸಲಾಗಿರುತ್ತದೆ. ಅಂದೇ ನ್ಯಾಯಾಲಯದ ಮುಂದೆ ಹಾಜರುಪಡಿಸಿದ್ದ ಕಾರನ್ನು ಗುರುತಿಸಿದ್ದು ಅದನ್ನು ಎಂಒ-1 ಎಂದು ಗುರುತಿಸಲಾಯಿತು. ನಂತರ ಕಛೇರಿಗೆ ಬಂದು ತಕ್ಷೀರನ್ನು ಪ್ರ.ಮಾ.ವ. ಸಂಖ್ಯೆ: 18/97-98 ಮೂಲಕ ದಾಖಲು ಮಾಡಿರುತ್ತಾರೆ. ಪ್ರಥಮ ಮಾಹಿತಿ ವರದಿಯನ್ನು ನೋಡಿ ಅದನ್ನು ನಿಶಾನೆ ಪಿ-2 ಎಂದು ಅದರ ಮೇಲಿನ ಸಹಿಯನ್ನು ನಿಶಾನೆ ಪಿ-2ಎ ಎಂದು ಗುರುತಿಸಲಾಗಿದೆ. ಮುಂದಿನ ಕ್ರಮಕ್ಕಾಗಿ ಪ್ರಕರಣವನ್ನು ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರಿಗೆ ಹಸ್ತಾಂತರಿಸಲಾಯಿತೆಂದು ತಿಳಿಸಿರುತ್ತಾರೆ.

ಈ ಸಾಕ್ಷಿದಾರರು ಅರ್ಜಿದಾರರ ಪರ ವಕೀಲರ ಪಾಟಿ ಸವಾಲಿಗೆ ಉತ್ತರಿಸುತ್ತಾ ನಂತೂರು ಕಾಸರಗೋಡಿನಿಂದ ಉಡುಪಿಗೆ ಹೋಗುವ ಹೆದ್ದಾರಿಯೆಂದು ನಾವು ನಂತೂರು ಕಡೆಯಿಂದ ಹೋಗುವಾಗ ವಾಹನವು ಕರ್ನಾಟಕ ಪಾಲಿಟೆಕ್ನಿಕ್ ಕಡೆಯಿಂದ ಬರುತ್ತಿತ್ತೆಂದೂ ವಾಹನವನ್ನು ಸುಮಾರು 50 ಮೀಟರಿನ ಅಂತರದಲ್ಲಿ ನೋಡಿದೆವು. ಕಾರನ್ನು ಅನುಮಾನ ಮೇಲೆ ನಿಲ್ಲಿಸಲು ಸೂಚನೆ ನೀಡಿದೆನು, ಆದರೆ ವಾಹನವನ್ನು ನಿಲ್ಲಿಸದೇ ಸುಮಾರು 100 ಮೀಟರು ದೂರದಲ್ಲಿ ನಿಲ್ಲಿಸಿದರು. ಕಾರಿನಲ್ಲಿ ಇಬ್ಬರು ವ್ಯಕ್ತಿಗಳು ಇದ್ದರು ಎಂದು ತಿಳಿಸಿರುತ್ತಾರೆ. ಕಾರನ್ನು ನಿಲ್ಲಿಸಲಿಲ್ಲ ಮತ್ತು ಮದ್ಯದ ಪೆಟ್ಟಿಗೆಗಳನ್ನು ಜಪ್ತು ಮಾಡಿಲ್ಲ ಎಂದರೆ ಸರಿಯಲ್ಲ ಎಂದು ಮತ್ತು ಸ್ಥಳದಲ್ಲಿ ಪಂಚರು ಸಿಗದ ಕಾರಣ ಇಲಾಖೆಯವರನ್ನು ಪಂಚರನ್ನಾಗಿಸಿಕೊಂಡಿರುವುದಾಗಿ ತಿಳಿಸಿರುತ್ತಾರೆ. ಈ ಪಾಟೀ ಸವಾಲಿನಿಂದ ಮುಖ್ಯ ವಿಚಾರಣೆ ಹೇಳಿಕೆಗೆ ಪೂರಕವಾಗಿದ್ದು ಯಾವುದೇ ವಿರುದ್ಧ ಅಂಶಗಳು ಕಂಡು ಬಂದಿರುವುದಿಲ್ಲ.

**ಪ್ರಾ.ಸಾ-2:**

ಶ್ರೀ ಸೋಮನಾಥ, ಅಬಕಾರಿ ರಕ್ಷಕ, ಇವರು ಈ ಪ್ರಾಧಿಕಾರದ ಮುಂದೆ ದಿ: 22.11.2001 ರಂದು ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆಯನ್ನು ನುಡಿದು ದಿ: 27.6.1998 ರಂದು 5 ಗಂಟೆ ಸಮಯ ಕರ್ನಾಟಕ ಪಾಲಿಟೆಕ್ನಿಕ್ ಹತ್ತಿರ ಗಸ್ತು ತಿರುಗುತ್ತಿರುವಾಗ ನಂತೂರು ಕ್ರಾಸ್‌ನಿಂದ ಕುಲಶೇಖರ ಕಡೆಗೆ ಒಂದು ನೀಲಿ ಬಣ್ಣದ ಕಾರು ಬರುತ್ತಿದ್ದು ಅದನ್ನು ನಿಲ್ಲಿಸಲು ಸೂಚನೆ ನೀಡಿದಾಗ ಕಾರು ನಿಲ್ಲದೇ ಮುಂದೆ ಸುಮಾರು 200 ಮೀಟರು ಬೆನ್ನಟ್ಟಿ ನಿಲ್ಲಿಸಿ ಪರಿಶೀಲಿಸಿದೆವು. ಕಾರಿನಲ್ಲಿ 2 ಜನ ಇದ್ದರು ಕಾರನ್ನು ಪರಿಶೀಲಿಸಲಾಗಿ ಕಾರಿನ ಹಿಂಭಾಗದಲ್ಲಿ 24 ಪೆಟ್ಟಿಗೆ ಇದ್ದು ಅವುಗಳಲ್ಲಿ ಪ್ರತಿ ಪೆಟ್ಟಿಗೆಯಲ್ಲಿ 180 ಮಿಲಿಯ 48 ಬಾಟ್ಲಿಗಳು ಇದ್ದವೆಂದು ಈ ಬಗ್ಗೆ ವಿಚಾರಿಸಲಾಗಿ ಯಾವುದೇ ಪರ್ಮಿಟ್ ಇರಲಿಲ್ಲವೆಂದು ಸ್ವತಂತ್ರ ಸಾಕ್ಷಿಗಳೂ ಇಲ್ಲದ ಕಾರಣ ಇಲಾಖೆಯವರನ್ನು ಪಂಚರನ್ನಾಗಿಸಿ ಪ್ರತೀ ಪೆಟ್ಟಿಗೆಯಿಂದ ತಲಾ 1 ಬಾಟ್ಲಿಯಂತೆ ರಾಸಾಯನಿಕ ಮಾದರಿ ತೆಗೆಯಲಾಯಿತು ಮತ್ತು ಸ್ಥಳದಲ್ಲಿ ಮಹಜರನ್ನು ತಯಾರಿಸಿ ವಾಹನವನ್ನು ಮತ್ತು ಮದ್ಯವನ್ನು ಮುಂದಿನ ಕ್ರಮಕ್ಕಾಗಿ ವಶಪಡಿಸಿಕೊಂಡರೆಂದು ಹೇಳಿಕೆ ನೀಡಿರುತ್ತಾರೆ. ಪ್ರಾ.ಸಾ-2 ಇವರು ಪ್ರಾ.ಸಾ-1 ಇವರಿಗೆ ಪೂರಕವಾಗಿ ಸಾಕ್ಷಿಯನ್ನು ನುಡಿದಿದ್ದು ಈ ಸಾಕ್ಷದಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನ ಕಂಡು ಬರುವುದಿಲ್ಲ.

**ಪ್ರಾ.ಸಾ-3:**

ಅಬಕಾರಿ ರಕ್ಷಕರಾದ ಶ್ರೀ ವಿಠಲ ಶೆಟ್ಟಿ, ಇವರು ಈ ಪ್ರಾಧಿಕಾರದ ಮುಂದೆ ದಿ: 13.12.2001 ರಂದು ಹೇಳಿಕೆ ನೀಡಿದ್ದು ದಿ: 10.7.1998 ರಂದು ಈ ಪ್ರಕರಣಕ್ಕೆ ಸಂಬಂಧಿಸಿದ 24 ಬಾಟ್ಲಿ ಬಾಸ್ ವಿಸ್ಕಿ ಮತ್ತು ಕೋರಿಕೆ ಪತ್ರ ಮತ್ತು ಮಾದರಿ ಸೀಲುಗಳನ್ನು ಅಬಕಾರಿ ನಿರೀಕ್ಷಕರ ಆದೇಶದಂತೆ ರಾಸಾಯನಿಕ ಪರೀಕ್ಷೆಗೆ ಒಪ್ಪಿಸಿದೆನು. ಅಂದೇ ಪರೀಕ್ಷೆ ಮಾಡಿದ ಬಾಟ್ಲಿಗಳನ್ನು ನಿರೀಕ್ಷಕರಿಗೆ ಒಪ್ಪಿಸಿದೆನು. ರಾಸಾಯನಿಕ ತಜ್ಞರಿಗೆ ಒಪ್ಪಿಸಿದ ಕೋರಿಕೆ ಪತ್ರವನ್ನು ನೋಡಿದ್ದು ಅದನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು.

**ಪ್ರಾ.ಸಾ-4:**

ಈ ಪ್ರಕರಣದ ತನಿಖಾಧಿಕಾರಿ ಶ್ರೀ ಸೋಮೇಶ್ವರ ಇವರು ಈ ಪ್ರಾಧಿಕಾರದ ಮುಂದೆ ದಿನಾಂಕ: 5.9.2002 ರಂದು ಹಾಜರಾಗಿ ತಮ್ಮ ಸಾಕ್ಷಿ ನೀಡಿರುತ್ತಾರೆ. ಅವರು ದಿ: 5.7.98 ರಂದು ಪ್ರಕರಣದ ದಾಖಲಾತಿ, ರಾಸಾಯನಿಕ ವಿಶ್ಲೇಷಣಾ ಬಾಟ್ಲಿಗಳನ್ನು ಅಬಕಾರಿ ನಿರೀಕ್ಷಕರು, ಇ.ಐ.ಬಿ. ಇವರಿಂದ ಪಡೆದುಕೊಂಡು ದಿ: 10.7.98 ರಂದು ಮಾದರಿ ಶೀಷೆಗಳನ್ನು ರಾಸಾಯನಿಕ ತಜ್ಞರಿಗೆ ಕಳುಹಿಸಿಕೊಟ್ಟಿದ್ದು ದಿ: 15.9.99 ರಂದು ರಾಸಾಯನಿಕ ವರದಿಯನ್ನು ಪಡೆದಿರುತ್ತೇನೆ. ತನಗೆ ವರ್ಗಾವಣೆ ಆದ ಪ್ರಯುಕ್ತ ರಾಸಾಯನಿಕ ವರದಿ ಮತ್ತು ಬಾಟ್ಲಿಗಳನ್ನು ಕೂಳೂರು ವಲಯದ ಅಬಕಾರಿ ನಿರೀಕ್ಷಕರು ಇವರಿಗೆ ಹಸ್ತಾಂತರಿಸಿರುವುದಾಗಿ ತಿಳಿಸಿ ರಾಸಾಯನಿಕ ತಜ್ಞರ ವರದಿಯ ಪ್ರತಿಯನ್ನು ನೋಡಿ ಗುರುತಿಸಿರುತ್ತಾರೆ. ಗುರುತಿಸಲಾದ ಪ್ರತಿಯನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು. ಸಾಕ್ಷಿದಾರರು ವಕೀಲರ ಪಾಟೀಸವಾಲಿಗೆ ಈ ಪ್ರಕರಣದ ದಾಖಲೆಗಳನ್ನು ಅಬಕಾರಿ ನಿರೀಕ್ಷಕರು, ಇಐಬಿ ಇವರಿಂದ ಪಡೆದುಕೊಂಡಿಲ್ಲವೆನ್ನುವುದು ಸರಿಯಲ್ಲ.

ಮಾದರಿ ಶೀಷೆಗಳನ್ನು ರಾಸಾಯನಿಕ ತಜ್ಞರಿಗೆ ಕಳುಹಿಸಿಲ್ಲ ಎನ್ನುವುದು ಸರಿಯಲ್ಲ ಎಂದು ಮಾದರಿ ಶೀಷೆಗಳನ್ನು ಕಳುಹಿಸುವಾಗ ರಾಸಾಯನಿಕ ತಜ್ಞರಿಗೆ ಒಂದು ಮನವಿ ಪತ್ರವನ್ನು ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ.

ಈ ಪ್ರಕರಣದ ಅಭಿಯೋಜನೆ ಪರ ಸಾಕ್ಷಿದಾರರಾದ ಪ್ರಾ.ಸಾ-1, ಪ್ರಾ.ಸಾ-2, ಪ್ರಾ.ಸಾ-3 ಮತ್ತು ಪ್ರಾ.ಸಾ-4 ಇವರುಗಳ ಸಾಕ್ಷಿ ಹೇಳಿಕೆಯಿಂದ ಹಾಗೂ ಗುರುತಿಸಲಾದ ಮತ್ತು ಹಾಜರುಪಡಿಸಿರುವ ದಾಖಲೆಗಳಿಂದ ದಿ: 27.6.98 ರಂದು ಜಪ್ತುಪಡಿಸಿರುವ ವಾಹನದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಾಣೆ ಮಾಡಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಭೀತಾಗಿರುತ್ತದೆ. ಈ ಕಾರಣದಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದು ಉತ್ತರಿಸುತ್ತೇನೆ.

ಈ ಪ್ರಕರಣದ ಎರಡನೇ ಅಂಶವಾಗಿರುವ ಜಪ್ತುಪಡಿಸಿರುವ ವಾಹನದ ಮಾಲೀಕರು ಅಕ್ರಮ ಮದ್ಯಸಾಗಣೆ ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂಬುದನ್ನು ಸಾಭೀತುಪಡಿಸಬೇಕಾಗಿದ್ದು ಈ ಬಗ್ಗೆ ಪ್ರತಿರಕ್ಷಾ ಸಾಕ್ಷಿಯನ್ನು ಅರ್ಜಿದಾರರ ಪರ ವಕೀಲರು ಹಾಜರುಪಡಿಸಿದ್ದು ಅವರ ಸಾಕ್ಷಿಯನ್ನು ಪಡೆಯಲಾಗಿದೆ.

**ಡಿ.ಡಬ್ಲ್ಯೂ 1:**

ಶ್ರೀ ಉದಯ ಅಂಚನ್ ಬಿನ್ ರುಕ್ಮಯ್ಯ ಪೂಜಾರಿ ಇವರು ವಾಹನದ ಮಾಲೀಕರಾಗಿದ್ದು ಇವರು ಈ ಪ್ರಾಧಿಕಾರದ ಮುಂದೆ ದಿ: 3.7.2003 ರಂದು ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿರುತ್ತಾರೆ. ತಾನು ಈ ಪ್ರಕರಣದ ಅರ್ಜಿದಾರನಾಗಿದ್ದು ಒಂದು ಮಾರುತಿ ಕಾರಿನ ಮಾಲೀಕನಾಗಿರುತ್ತೇನೆ. ಅದರ ನೋಂದಣಿ ಸಂಖ್ಯೆ: ಸಿಆರ್‌ಎಕ್ಸ್: 3087 ಆಗಿರುತ್ತದೆ. ನನ್ನ ಕಾರನ್ನು ಅಕ್ರಮ ಸಾರಾಯಿ ಸಾಗಣೆಗೆ ಉಪಯೋಗಿಸಿಲ್ಲ, ದಿ: 27.6.98 ರಂದು ತನ್ನ ಸ್ನೇಹಿತರಾದ ಸೋಮಶೇಖರ ಎಂಬವರು ತನ್ನ ವೈಯಕ್ತಿಕ ಕೆಲಸಕ್ಕಾಗಿ ನನ್ನ ಕಾರನ್ನು ಕೊಂಡುಹೋಗಿದ್ದಾರೆಂದು ಅದೇ ದಿನ ಮಧ್ಯಾಹ್ನ 4.30 ಕ್ಕೆ ಕಾರನ್ನು ಅಬಕಾರಿ ಇಲಾಖೆಯವರು ವಶಪಡಿಸಿಕೊಂಡಿದ್ದಾರೆಂದು ಫೋನ್ ಮುಖಾಂತರ ತಿಳಿಸಿದ್ದು ನಾನು ಕೂಡಲೇ ಬಿಜೈಯಲ್ಲಿರುವ ಅಬಕಾರಿ ಕಛೇರಿಗೆ ಹೋದೆನು. ಅಲ್ಲಿಯ ಅಧಿಕಾರಿಗಳು ನನ್ನನ್ನು ಕೂಡಾ ಆರೋಪಿ ಎಂದು ಪರಿಗಣಿಸಿದರು ಎಂದು ಈ ಬಗ್ಗೆ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ದಾಖಲಾಗಿದ್ದು ಸದ್ರಿ ಪ್ರಕರಣದಲ್ಲಿ ನ್ಯಾಯಾಲಯವು ತಾನು ನಿರಪರಾಧಿಯೆಂದು ತೀರ್ಪನ್ನು ನೀಡಿರುವುದಾಗಿ ತಿಳಿಸುತ್ತಾ ನನ್ನ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಬಾರದಾಗಿ ವಿನಂತಿಸಿರುತ್ತಾರೆ. ನಂತರ ಸಹಾಯಕ ಅಭಿಯೋಜನೆ ನಿರ್ದೇಶಕರ ಪಾಟೀ ಸವಾಲಿಗೆ ಉತ್ತರಿಸುತ್ತಾ ದಿ: 27.6.98 ರಂದು ತನ್ನ ಸ್ನೇಹಿತರು ಕಾರನ್ನು ತನ್ನ ವೈಯಕ್ತಿಕ ಕೆಲಸಕ್ಕಾಗಿ ಕೊಂಡೊಯ್ದಿದ್ದರು. ಆದರೆ ಯಾವ ಸ್ಥಳಕ್ಕೆ ಮತ್ತು ಯಾವ ಕೆಲಸಕ್ಕಾಗಿ ತೆಗೆದುಕೊಂಡು ಹೋಗಿದ್ದರು ಎಂಬುದು ತಿಳಿದಿಲ್ಲ. ಕಾರನ್ನು ನಾನೇ ಬಾಡಿಗೆಗಾಗಿ ಉಪಯೋಗಿಸುತ್ತೇನೆ. ದಿ: 27.6.98 ಸಂಜೆ 4.30 ಕ್ಕೆ ಕಾರನ್ನು ವಶಪಡಿಸಿಕೊಂಡ ಬಗ್ಗೆ ಫೋನಿನಲ್ಲಿ ತಿಳಿಸಿರುತ್ತಾರೆ. ನಾನು ಆ ಸಮಯದಲ್ಲಿ ಮನೆಯಲ್ಲಿದ್ದೆ ಎಂದು ತಿಳಿಸಿರುತ್ತಾರೆ. ದಿ: 27.6.98 ರಂದು ನನ್ನ ಮಾರುತಿ ಕಾರಿನಲ್ಲಿ ಅಕ್ರಮ ಮದ್ಯ ಸಾಗಿಸುವುದು ನನಗೆ ತಿಳಿದಿತ್ತು ಎಂದರೆ ಸರಿಯಲ್ಲ ಎಂದು ತಿಳಿಸಿರುತ್ತಾರೆ ಮತ್ತು ಈ ಪ್ರಾಧಿಕಾರದ ಮುಂದೆ ಸುಳ್ಳು ಹೇಳಿಕೆ ನೀಡುತ್ತಿದ್ದೇನೆಂದರೆ ಸರಿಯಲ್ಲ ಎಂದು ತಿಳಿಸಿರುತ್ತಾರೆ.

ಸದ್ರಿ ಅಪರಾಧವು ತನ್ನ ತಿಳುವಳಿಕೆಗೆ ಬಾರದಂತೆ ನಡೆದಿತ್ತು ಎಂದು ತಾನು ಅದಕ್ಕೆ ಭಾಗಿಯಾಗಿರುವುದಿಲ್ಲ ಎಂದು ಸಿದ್ದಪಡಿಸುವ ಜವಾಬ್ದಾರಿ ವಾಹನ ಮಾಲೀಕರದಾಗಿದ್ದು ಡಿಡಬ್ಲ್ಯೂ-1 ಇವರು ದಿ: 3.7.2003 ರಂದು ಹೇಳಿಕೆಯನ್ನು ನೀಡಿರುವುದು ಒಂದು ಕಟ್ಟುಕತೆಯಾಗಿರುತ್ತದೆ. ದಿ: 27.6.98 ರಲ್ಲಿ ಅಬಕಾರಿ ನಿರೀಕ್ಷಕರು ಅಕ್ರಮ ಮದ್ಯ ಸಾಗಾಣೆಯನ್ನು ಪತ್ತೆ ಹಚ್ಚುವಾಗ ವಾಹನ ಮಾಲೀಕರಾದ ಉದಯ ಅಂಚನ್ ಇವರು ವಾಹನದಲ್ಲಿ ಸ್ವತಃ ಹಾಜರಿದ್ದು ಅವರನ್ನು ಪ್ರಕರಣದಲ್ಲಿ ದಸ್ತಗಿರಿ ಮಾಡಿರುತ್ತಾರೆ. ಆದುದ್ದರಿಂದ ವಾಹನ ಮಾಲೀಕರು ಸ್ವತಃ ತಾವೇ ಈ ಅಕ್ರಮ ಕಾನೂನು ಬಾಹಿರ ಕೃತ್ಯದಲ್ಲಿ ಭಾಗಿಯಾಗಿರುತ್ತಾರೆ. ಈ ಕಾರಣದಿಂದ 2ನೇ ಅಂಶಕ್ಕೆ ನಕಾರಾತ್ಮಕವಾಗಿ ಉತ್ತರ ಇಲ್ಲ ಎಂದು ಪರಿಗಣಿಸಿರುತ್ತೇನೆ. ಮತ್ತು ಸ್ಥಳ ಮಹಜರಿನೊಂದಿಗೆ ಅಕ್ರಮ ಮದ್ಯವನ್ನು ಅದನ್ನು ಸಾಗಣೆ ಮಾಡಲು ಉಪಯೋಗಿಸುತ್ತಿದ್ದ ಮಾರುತಿ ಕಾರನ್ನು ಇಲಾಖೆಯ ವಶಕ್ಕೆ ತೆಗೆದುಕೊಂಡಿರುವುದು ಮತ್ತು ಮೊಕದ್ದಮೆಯನ್ನು ದಾಖಲು ಮಾಡಿರುವುದು ಲಭ್ಯವಿರುವ ದಾಖಲೆಗಳಿಂದ ಸಾಬೀತಾಗಿರುತ್ತದೆ.

ಈ ಎಲ್ಲಾ ಕಾರಣಗಳಿಂದ ಪ್ರಕರಣದಲ್ಲಿ ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ:813:ಡಿಟಿಸಿಆರ್:1997-1998, ದಿನಾಂಕ: 30ನೇ ಅಕ್ಟೋಬರ್ 2003**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43(ಎ)ರ ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಅಬಕಾರಿ ನಿರೀಕ್ಷಕರು, ನಂ. 1, ಅಬಕಾರಿ ಗುಪ್ತವಾರ್ತಾದಳ, ಮಂಗಳೂರು ವಿಭಾಗ, ಮಂಗಳೂರು ಇವರು ದಾಖಲು ಮಾಡಿದ ಮೊಕದ್ದಮೆ ಸಂಖ್ಯೆ: 18/1997-98, ದಿನಾಂಕ: 27.6.1998 ರಲ್ಲಿ ಜಪ್ತು ಪಡಿಸಲಾಗಿರುವ ವಾಹನ ಮಾರುತಿ ಕಾರು ಸಂ: ಸಿಆರ್‌ಎಕ್ಸ್-3087 ನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿ: 30.10.2003 ರಂದು ಉಖ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಗೋವಿಂದಪ್ಪ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

## ಅನುಬಂಧ-1

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ.: 1 - ಶ್ರೀ ಆರ್.ಜೆ. ಜ್ವಾಲಣ್ಣ, ಅಬಕಾರಿ ನಿರೀಕ್ಷಕರು, ಇ.ಐ.ಬಿ. ಮಂಗಳೂರು ವಿಭಾಗ

ಪ್ರಾ.ಸಾ.: 2 - ಶ್ರೀ ಸೋಮನಾಥ, ಅಬಕಾರಿ ರಕ್ಷಕ, ಇ.ಐ.ಬಿ. ಮಂಗಳೂರು ವಿಭಾಗ

ಪ್ರಾ.ಸಾ.: 3 - ಶ್ರೀ ವಿಠಲ ಶೆಟ್ಟಿ, ಅಬಕಾರಿ ರಕ್ಷಕ, ಕುಲಶೇಖರ ವಲಯ

ಪ್ರಾ.ಸಾ.: 4 - ಶ್ರೀ ಜೆ.ಎಸ್. ಸೋಮೇಶ್ವರ, ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪವಲಯ

## ಅನುಬಂಧ-2

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 - ಮಹಜರು ಪ್ರತಿ

ನಿಶಾನೆ ಪಿ-1ಎ - ಅದರ ಮೇಲಿನ ಸಹಿ

ನಿಶಾನೆ ಪಿ-2 - ಪ್ರಥಮ ವರ್ತಮಾನ ವರದಿಯ ಪ್ರತಿ

ನಿಶಾನೆ ಪಿ-2ಎ - ಅದರ ಮೇಲಿನ ಸಹಿ

ನಿಶಾನೆ ಪಿ-3 - ರಾಸಾಯನಿಕ ವರದಿಯ ಪ್ರತಿ

## ಅನುಬಂಧ-3

**ಫಿರ್ಯಾದುದಾರರ ಪರ ಅರ್ಜಿದಾರರು ಮಂಡಿಸಲಾದ ಸೊತ್ತುಗಳು:**

ಎಂಬ - 1 - ಮಾರುತಿ ಕಾರು

## ಅನುಬಂಧ-4

ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:

ಡಿ.ಡಬ್ಲ್ಯೂ-1 - ವಾಹನ ಮಾಲೀಕರು

## ಅನುಬಂಧ-5

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು - ಇಲ್ಲ

**ಗೋವಿಂದಪ್ಪ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 1240

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ನಲ್ಲಹಳ್ಳಿ ಗ್ರಾಮದಲ್ಲಿ ಮಲ್ಟಿ ಕಲರ್ ಗ್ರಾನೈಟ್, ಶ್ರೀ ಚಿನ್ನಪ್ಪ ರವರ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 448ರ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸುವ ಬಗ್ಗೆ.

**ಉಲ್ಲೇಖ:** 1) ಕೇಂದ್ರ ಕಛೇರಿ ಪತ್ರ ಸಂಖ್ಯೆ: ಡಿಸಿಬಿ:ಕಗಗು 448:2002-03:6303, ದಿನಾಂಕ: 11.3.2003.

2) 2002-03ನೇ ಸಾಲಿನ ಲೆಕ್ಕ ಪರಿಶೀಲನಾ ವರದಿ.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ನಲ್ಲಹಳ್ಳಿ ಗ್ರಾಮದ ಸರ್ವೆ ನಂ. 329/470 ರಲ್ಲಿ ಶ್ರೀ ಚಿನ್ನಪ್ಪ ರವರಿಗೆ 2.00 ಎಕರೆಗೆ ದಿ: 25.5.2001 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರಗಳಡಿಯಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರಗಳನ್ನು ನೀಡಿ 2003ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 58,772.00 ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2 ರಲ್ಲಿ ತಿಳಿಸಿರುವಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂ.ಆರ್.ಸಿ. 92 ದಿನಾಂಕ: 2.7.94 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

## ಆದೇಶ

**ಆದೇಶ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:448:2003-04/13657, ದಿನಾಂಕ: 29ನೇ ಅಕ್ಟೋಬರ್ 2003**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ನಲ್ಲಹಳ್ಳಿ ಗ್ರಾಮದ ಸರ್ವೆ ನಂ. 329/470 ರಲ್ಲಿ 2.00 ಎಕರೆಗೆ ಮಲ್ಟಿ ಕಲರ್ ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 448 ನ್ನು ತಕ್ಷಣದಿಂದ

ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಿ ಗುತ್ತಿಗೆಯನ್ನು ರದ್ದುಗೊಳಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ.ಆರ್. 1241

ನಿರ್ದೇಶಕರು

ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

## ಅಧಿಸೂಚನೆ

### ನಂ. ಎಂಎಜಿ (1) ಸಿಆರ್ 84:2002-03, ದಿನಾಂಕ: 20ನೇ ಅಕ್ಟೋಬರ್ 2003

1962ರ ಕರ್ನಾಟಕ ನಿಕ್ಷೇಪ ನಿಧಿ ಕಾಯ್ದೆಯ ನಿಬಂಧನೆ 4(ಬಿ) ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ, ಶಿವಮೊಗ್ಗ ಜಿಲ್ಲಾಧಿಕಾರಿ, ತುಷಾರ್ ಗಿರಿನಾಥ್ ಆದ ನಾನು ಹಿತಾಸಕ್ತಿವುಳ್ಳ ವ್ಯಕ್ತಿಗಳಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಹೊಸನಗರ ತಾಲ್ಲೂಕು ಮೂಡುಗೊಪ್ಪ ಗ್ರಾಮದ ನಗರ ದುಬಾರಿಕಟ್ಟೆಯ ಫ್ರ್ಯಾಂಕಿ ಡಿಮೆಲ್ಲೋ ಅವರ ವಾಸದ ಮನೆಯ ಬಾವಿಯಲ್ಲಿ ನಿಧಿ ನಿಕ್ಷೇಪ ದೊರೆತಿದ್ದು, ಅವು ಈ ಕೆಳಗೆ ವಿವರಣೆ ನೀಡಿದಂತೆ ಇರುತ್ತದೆ. ಈ ಸಂಬಂಧವಾಗಿ ಹಿತಾಸಕ್ತಿವುಳ್ಳವರು ಸಿಕ್ಕಿರುವ ನಿಧಿ ನಿಕ್ಷೇಪದ ಮೇಲೆ ತಮ್ಮ ಹಕ್ಕನ್ನು ಸ್ಥಾಪಿಸುವುದಿದ್ದಲ್ಲಿ, ಖುದ್ದಾಗಿಯಾಗಲೀ ಅಥವಾ ತಮ್ಮ ಪ್ರತಿನಿಧಿಯ ಮೂಲಕವಾಗಲೀ ಹಾಜರಾಗಿ ತಮ್ಮ ಹಕ್ಕನ್ನು ಪ್ರತಿಪಾದಿಸತಕ್ಕದ್ದು.

| ಕ್ರ.ಸಂ. | ನಿಧಿಯ ಸ್ವರೂಪ | ಪ್ರಮಾಣ | ತೂಕ | ಅಂದಾಜು ಬೆಲೆ |
|---|---|---|---|---|
| 1 | 2 | 3 | 4 | 5 |
| 1 | ವೀರಗಲ್ಲು ರೂಪದಲ್ಲಿರುವ ಜೋಡಿ ವಿಗ್ರಹಗಳ ಅಚ್ಚು (ಬಂಗಾರದ್ದು) | 01 | 14-520 | 7,260-00 |
| 2 | ತಗಡಿನ ಪೀಠ (ಬಂಗಾರದ್ದು) | 01 | 22-190 | 11,095-00 |
| 3 | ವೀರಗಲ್ಲು ರೂಪದಲ್ಲಿರುವ ತಗಡುಗಳು (ಬೆಳ್ಳಿಯದು) | 03 | 67-800 | 678-00 |
| 4 | ಛತ್ರಿ (ಬೆಳ್ಳಿಯದು) | 01 | 28-790 | 287-90 |
| 5 | ನಾಗರ ಪ್ರತಿಮೆ (ಬೆಳ್ಳಿಯದು) | 01 | 31-460 | 314-60 |
| 6 | ಗಿಂಡಿ ಮುಚ್ಚಳ ಸಹಿತ (ಬೆಳ್ಳಿಯದು) | 01 | 196-940 | 1969-40 |
| 7 | ಬಟ್ಟಲು (ತಾಮ್ರದ್ದು) | 01 | 22-300 | 25-00 |
| 8 | ಗಿಂಡಿಯ ಮುಚ್ಚಳ (ಬೆಳ್ಳಿಯದು) | 01 | 13-840 | 138-40 |
| 9 | ಛತ್ರಿಯ ಹಿಡಿ (ಬೆಳ್ಳಿಯದು) | 01 | 40-000 | 400-00 |
| | ಒಟ್ಟು | | | ರೂ. 22,168-30 |

ತುಷಾರ್ ಗಿರಿನಾಥ್

ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ.

## OFFICE OF THE DEPUTY COMMISSIONER, SHIMOGA DISTRICT, SHIMOGA

## NOTIFICATION

### No. MAG(1)CR.84/2002-03, Dated 20th October 2003

In exercise of the powers conferred on me under the provisions of sub section (b) of Section 4 of Karnataka Treasure Trove Act, 1962, I, Tushar Giri Nath, Deputy Commissioner, Shimoga District, do hereby notify for the information of those interested, that a treasure trove has been found in the well attached to the residence of Franky Demello, r/o Mudugoppa village (Nagar Dubari Katte) Hosanagar Taluk. The particulars are furnished below: and persons claiming the treasure or any part thereof should appear personally or by authorised agent before the undersigned to put forth their claims, if any.

| Sl. No. | Nature of Treasure | Quantity | Weighment | Approximate value Rs. Ps. |
|---|---|---|---|---|
| 1 | 2 | 3 | 4 | 5 |
| 1 | Graven images (Gold) (Veeragallu roopadalliruva jodi vigrahagala acchu - Bangaraddu) | 01 | 14-520 | 7,260-00 |
| 2 | Seat (Gold) (Tagadina Peeta-Bangaraddu) | 01 | 22-190 | 11,095-00 |
| 3 | Graven images (Silver) (Veeragallu roopadalliruva tagadugalu-Belliyadu) | 03 | 67-800 | 678-00 |
| 4 | Umbrella (Silver) (Chatri-Belliyadu) | 01 | 28-790 | 287-90 |
| 5 | Snake (Silver) (Naagara-Belliyadu) | 01 | 31-460 | 314-60 |
| 6 | Small pot with lid (Silver) (Gindi Muchala sahita-Belliyadu) | 01 | 196-940 | 1,969-40 |

| 1 | 2 | 3 | 4 | 5 |
|---|---|---|---|---|
| 7 | Small Bowl (Copper) (Tamrada Battalu) | 01 | 22-300 | 25-00 |
| 8 | Lid of small pot (Silver) (Gindiya Muchala-Belliyadu) | 01 | 13-840 | 138-40 |
| 9 | Umbrella Rod (Silver) (Chatriya hidi-Belliyadu) | 01 | 40-000 | 400-00 |
| | | | | 22,168-30 |

PR-1242

**Tushar Giri Nath**
Deputy Commissioner, Shimoga District.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ**

**ಪ್ರಕರಣ ಸಂಖ್ಯೆ: ಕಾಪಕಾ:ಎಸ್‌ಆರ್: 102:2003/145, ದಿನಾಂಕ: 8ನೇ ಅಕ್ಟೋಬರ್ 2003**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

ಶ್ರೀಮತಿ ಗೌಳಾಬಾಯಿ ಕೋಂ
ಬಾಳಾಸಾಹೇಬ್ ಬೆಂಗೆ ಮತ್ತು
ಇತರೆ 6 ಜನ ಸಾ: ಮಹಾಲಿಂಗಪೂರ
ತಾ: ಮುಧೋಳ, ಜಿಲ್ಲೆ: ಬಾಗಲಕೋಟೆ

ಶ್ರೀ ಪರಪ್ಪ ತಂದೆ ಅಲ್ಲಪ್ಪ ಬಯಪ್ಪಗೋಳ
ಸಾ: ಸೈದಾಪೂರ, ತಾ: ಮುಧೋಳ
ಜಿಲ್ಲೆ: ಬಾಗಲಕೋಟೆ.
ದಿ. ಬ್ರ್ಯಾಂಚ್ ಮ್ಯಾನೇಜರ್,
ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ.
ಜಮಖಂಡಿ.

**ಪ್ರಕಟಣೆ**

ಶ್ರೀಮತಿ ಗೌಳಾಬಾಯಿ ಕೋಂ ಬಾಳಾಸಾಹೇಬ್ ಬೆಂಗೆ ಮತ್ತು ಇತರೆ 6 ಜನರು ಇವರುಗಳಾದ, ತಾವು ಮೃತ ಬಾಳಾಸಾಹೇಬ್ ಬೆಂಗೆ ಇವರ ಆಶ್ರಿತ ಅವಲಂಬಿದಾರರೆಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಬಾಳಾಸಾಹೇಬ್ ಬೆಂಗೆ ಇವರು ಒಂದನೇ ಪ್ರತಿವಾದಿಗಳಾದ ಶ್ರೀ ಪರಪ್ಪ ತಂದೆ ಅಲ್ಲಪ್ಪ, ಬಾಯಪ್ಪಗೋಳ ಇವರ ಟ್ರ್ಯಾಕ್ಟರ್-ಟ್ರೇಲರ್ ದಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತನ ಆಶ್ರಿತ ಅವಲಂಬಿತ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಸಲ್ಲಿಸತಕ್ಕದ್ದು, ತಪ್ಪಿದಲ್ಲಿ ಮೇಲ್ಕಂಡ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿಗಳು ಮತ್ತು ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ.

ಪಿ.ಆರ್. 1243

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ**

**ಮರಣ ಪ್ರಕರಣ ಸಂಖ್ಯೆ: ಕಾಅಬಿ:ಕಾನಪ:ಎಸ್‌ಆರ್: 134:2003, ದಿನಾಂಕ: 7ನೇ ಅಕ್ಟೋಬರ್ 2003**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

ಶ್ರೀಮತಿ ಇಂದಿರಾಬಾಯಿ ಚಂದಪ್ಪಾ
ನಡುವಿನಮನಿ, ವಾಸ-ರೈಲ್ವೆ ಸ್ಟೇಷನ್ ಹತ್ತಿರ,
ಬಿಜಾಪುರ. (ಇತರೆ 5 ಜನರು)

1. ದಿ. ಮ್ಯಾನೇಜಿಂಗ್ ಡೈರೆಕ್ಟರ್,
ಟಾಟಾ ಇಂಜಿನಿಯರಿಂಗ್ ಮತ್ತು
ಲೋಕೋಮೋಟಿವ್ ಕಂ. ಲಿಮಿಟೆಡ್,
ಪಿಂಪರಿ-ಪುಣೆ-411018

**ಪ್ರಕಟಣೆ**

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಚಂದಪ್ಪಾ ಎಸ್. ನಡುವಿನಮನಿ, ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 25.1.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ನಾನು ಶ್ರೀಮತಿ ಇಂದಿರಾಬಾಯಿ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು

ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್. 1244

ಕಾರ್ಮಿಕ ಪರಿಹಾರ ಆಯುಕ್ತರು,
ಉಪ ವಿಭಾಗ-2 ಬಿಜಾಪುರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ**

**ಮರಣ ಪ್ರಕರಣ ಸಂಖ್ಯೆ: ಕಾಅಬಿ:ಕಾನಪ: 131:2003, ದಿನಾಂಕ: 14ನೇ ಅಕ್ಟೋಬರ್ 2003**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| ಶ್ರೀಮತಿ ನೀಲವ್ವಾ ಮಲ್ಲಿಕಾರ್ಜುನ ಬಾವಿಕಟ್ಟಿ, ವಾಸ: ಸ್ಟೇಶನ್ ರೋಡ್, ಬ್ಯಾಕ್ ಸಿಂಧಗಿ ರೋಡ್, ಬಿಜಾಪುರ. | | 1. ಶ್ರೀ ಅಣ್ಣಪ್ಪಾ ರಾಮಚಂದ್ರ ಸೊನ್ನಗಿ, ವಾಸ: ಗಣಪತಿ ಚೌಕ, ಶಹಪೇಟ ಗಲ್ಲಿ, ಬಿಜಾಪುರ<br>2. ದಿ. ಬ್ರ್ಯಾಂಚ್ ಮ್ಯಾನೇಜರ್, ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ. ಬಿಜಾಪುರ. |

**ಪ್ರಕಟಣೆ**

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಸುರೇಶ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 30.6.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ನಾನು ಶ್ರೀಮತಿ ನೀಲವ್ವಾ ಮಲ್ಲಿಕಾರ್ಜುನ ಬಾವಿಕಟ್ಟಿ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್. 1245

ಕಾರ್ಮಿಕ ಪರಿಹಾರ ಆಯುಕ್ತರು,
ಉಪ ವಿಭಾಗ-2 ಬಿಜಾಪುರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ**

**ಮರಣ ಪ್ರಕರಣ ಸಂಖ್ಯೆ: ಕಾಅಬಿ:ಕಾನಪ: 135/136:2003, ದಿನಾಂಕ: 14ನೇ ಅಕ್ಟೋಬರ್ 2003**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಶ್ರೀಮತಿ ರಾಜಶ್ರೀ ಚಂದ್ರಶೇಖರ ಬಜೇಂತ್ರಿ, ವಾಸ: ಹೊನವಾರ ತಾ: ಜಿಲ್ಲೆ: ಬಿಜಾಪುರ<br>2) ಧರೆಪ್ಪಾ ಲಕ್ಷ್ಮಣ ಬಜೇಂತ್ರಿ, ವಾಸ: ಹೊನವಾರ ತಾ:ಜಿಲ್ಲೆ: ಬಿಜಾಪುರ | | 1) ಶ್ರೀ ಮೈನುದ್ದೀನ ನಬಿಸಾಬ ಮುಲ್ಲಾ ವಾಸ: ಎಪಿಎಂಸಿ ಮಾರ್ಕೆಟ್ ಯಾರ್ಡ್ ತಾ: ಅಥಣಿ ಜಿಲ್ಲೆ: ಬಿಜಾಪುರ<br>2) ದಿ ಬ್ರ್ಯಾಂಚ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ. ಬಿಜಾಪುರ. |

**ಪ್ರಕಟಣೆ**

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಸುಭಾಸ ಮತ್ತು ಯಲ್ಲವ್ವಾ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 2.7.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ನಾನು ಶ್ರೀಮತಿ ರಾಜಶ್ರೀ ಮತ್ತು ಧರೆಪ್ಪಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು

ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ದಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು,
ಉಪ ವಿಭಾಗ-2 ಬಿಜಾಪುರ ಜಿಲ್ಲೆ, ಬಿಜಾಪುರ.

ಪಿ.ಆರ್. 1246

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ**

**ಮರಣ ಪ್ರಕರಣ ಸಂಖ್ಯೆ: ಕಾಅಬಿ:ಕಾನಪ: 137:2003, ದಿನಾಂಕ: 14ನೇ ಅಕ್ಟೋಬರ್ 2003**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
| --- | --- | --- |
| ಶ್ರೀಮತಿ ಜನಾಬಾಯಿ ಲೇಟ್ ಅಪ್ಪಾಸಾಹೇಬ ಜಗತಾಪ ವಾಸ: ಅಸಂಗಿ ತಾ: ಜೆತ್ತ ಜಿಲ್ಲೆ: ಸಾಂಗಲಿ | | 1) ಶ್ರೀ ಮಲ್ಲಿಕಾರ್ಜುನ ಗುರಪ್ಪಾ ಖಾನಶೆಟ್ಟಿ ವಾಸ: ಅಸಂಗಿ ತಾ: ಜೆತ್ತ ಜಿಲ್ಲೆ: ಸಾಂಗಲಿ<br>2) ದಿ. ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ. ಬಿಜಾಪುರ. |

**ಪ್ರಕಟಣೆ**

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಅಪ್ಪಾಸಾಹೇಬ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 13.11.2002 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ನಾನು ಶ್ರೀಮತಿ ಜನಾಬಾಯಿ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ದಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು,
ಉಪ ವಿಭಾಗ-2 ಬಿಜಾಪುರ ಜಿಲ್ಲೆ, ಬಿಜಾಪುರ.

ಪಿ.ಆರ್. 1247

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ವಿಷಯ:** ವಿಶೇಷಾಧಿಕಾರಿ ನೇಮಕಗೊಂಡಿದ್ದ ಗಾಂಧೀನಗರ ಪ್ರಾಥಮಿಕ ಬಳಕೆದಾರರ ಸಹಕಾರ ಸಂಘ ನಿ. ಗಾಂಧಿನಗರ, ಶಿವಮೊಗ್ಗ, ಇದರ ನಿಷ್ಕ್ರಿಯತ - ಸಮಾಪನೆ ಕುರಿತು.

**ಉಲ್ಲೇಖ:**
1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ, ಇವರ ಪತ್ರ ಸಂಖ್ಯೆ: ಎಆರ್-24: ಸಮಾಪನ: ಸಿಆರ್-56:2002-03:2557:ದಿನಾಂಕ: 28.3.2003.
2) ಈ ಕಚೇರಿ ನೋಟೀಸ್ ಸಂಖ್ಯೆ: ಡಿಆರ್ಎಸ್:ಕಾನೂನು-3: ಡಿಎಲ್ಎಸ್:7:2003-04: ದಿನಾಂಕ: 16.6.2003.

**ಪೀಠಿಕೆ:-**

ಉಲ್ಲೇಖ (1)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ-ವಿಭಾಗ, ಶಿವಮೊಗ್ಗ ರವರು ಉಲ್ಲೇಖ (1)ರ ಪತ್ರದಲ್ಲಿ ವಿಶೇಷಾಧಿಕಾರಿ ನೇಮಕಗೊಂಡ ಗಾಂಧಿನಗರ ಪ್ರಾಥಮಿಕ ಬಳಕೆದಾರರ ಸಹಕಾರ ಸಂಘ ನಿ. ಗಾಂಧಿನಗರ, ಶಿವಮೊಗ್ಗ, ಇದರ ಆಡಳಿತ ಮಂಡಳಿ ಪುನರ್ ರಚನೆ ಸಾಧ್ಯವಾಗದ ಬಗ್ಗೆ, ಹಾಗೂ ಸಂಘದ ಚಟುವಟಿಕೆಗಳು ನಿಷ್ಕ್ರಿಯಗೊಂಡ ಬಗ್ಗೆ ವರದಿಸಿರುತ್ತಾರೆ. ಸದ್ರಿ ವರದಿಯನ್ನು ಪರಿಶೀಲಿಸಿದ ಸಂಘದ ವಿಶೇಷಾಧಿಕಾರಿಗೆ ಕಾಯಿದೆ ಕಲಂ 72(2) ರನ್ವಯ ನೋಟೀಸನ್ನು ಉಲ್ಲೇಖ (2)ರ ಪತ್ರದಲ್ಲಿ ನೀಡಲಾಗಿದೆ. ಸಂಘದ ವಿಶೇಷಾಧಿಕಾರಿ ನೇಮಕಗೊಂಡ ನಂತರ ಸಂಘದ ಪ್ರಭಾರವನ್ನು ಪಡೆಯಲು ಪ್ರಯತ್ನ ನಡೆಸಿದ್ದು, ಸಂಘದ ಪ್ರಭಾರವನ್ನು ಪಡೆದಿರುವುದಿಲ್ಲ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರು ಸಲ್ಲಿಸಿರುವ ಪ್ರಸ್ತಾವ ಪರಿಶೀಲನೆಯಿಂದ ಸಂಘದ ಪುನಃಶ್ಚೇತನದ ಬಗ್ಗೆ ಸದಸ್ಯರಿಗೆ ಆಸಕ್ತಿ ಇಲ್ಲದಿರುವ ಬಗ್ಗೆ ದೃಢಪಡುತ್ತದೆ. ಸಂಘದ ವಿಶೇಷಾಧಿಕಾರಿ ಸಂಘದ ಸಮಾಪನೆಗೆ ನಿಗದಿತ ಅವಧಿಯೊಳಗೆ ಆಕ್ಷೇಪಣೆಗಳನ್ನು ವ್ಯಕ್ತಗೊಳಿಸದಿರುವ ಕಾರಣ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

**ನಂ. ಡಿಆರ್ಎಸ್:ಕಾನೂನು-3:ಡಿಎಲ್ಎಸ್:7:2003-04, ದಿನಾಂಕ: 30ನೇ ಜೂನ್ 2003**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರು, ಕೆ. ಈಶ್ವರಸ್ವಾಮಿ, ಆದ ನಾನು ಕರ್ನಾಟಕ ಸಹಕಾರ ಸಂಘಗಳ 1959ರ ಕಾಯಿದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001:ದಿನಾಂಕ: 21.11.2001 ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸಿ, ಪೀಠಿಕೆಯಲ್ಲಿ ವಿವರಿಸಿದ ಕಾರಣಗಳಿಗಾಗಿ ಗಾಂಧೀನಗರ ಪ್ರಾಥಮಿಕ ಬಳಕೆದಾರರ ಸಹಕಾರ ಸಂಘ ನಿ. ಶಿವಮೊಗ್ಗ, ಈ ಸಂಘವನ್ನು ಸಮಾಪನೆಗೆ ಆದೇಶಿಸಿದ್ದೇನೆ.

ಕರ್ನಾಟಕ ಸಹಕಾರ ಸಂಘಗಳ 1959ರ ಕಾಯಿದೆ ಕಲಂ 73 ರನ್ವಯ ಶ್ರೀ ಎಸ್.ಹೆಚ್. ಷರೀಫ್, ಹಿರಿಯ ನಿರೀಕ್ಷಕರು, ಇವರನ್ನು ಸಂಘದ ಸಮಾಪನಾಧಿಕಾರಿಯಾಗಿ ನೇಮಿಸಿದ್ದೇನೆ.

ನೇಮಕಗೊಂಡ ಸಮಾಪನಾಧಿಕಾರಿಯವರು ಕೂಡಲೇ ಸಂಘದ ಪ್ರಭಾರವನ್ನು ವಹಿಸಿಕೊಂಡು ಈ ಕಛೇರಿಗೆ ವರದಿಸತಕ್ಕದ್ದು.

ಕಚೇರಿಯ ಮೊಹರು ಹಾಗೂ ನನ್ನ ಸಹಿಯೊಂದಿಗೆ ದಿನಾಂಕ: 30ನೇ ಜೂನ್ 2003 ರಂದು ನೀಡಿದ್ದೇನೆ.

**ಕೆ. ಈಶ್ವರಸ್ವಾಮಿ**

ಪಿ.ಆರ್. 1248 ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ.

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

**ವಿಷಯ:** ಆಡಳಿತಾಧಿಕಾರಿ ನೇಮಕಗೊಂಡ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ. ಉಂಬ್ಳೇಬೈಲು ಶಿವಮೊಗ್ಗ ತಾಲ್ಲೂಕ್, ಇದರ ಸಮಾಪನೆ - ಬಗ್ಗೆ.

**ಉಲ್ಲೇಖ:**
1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ, ಇವರ ಆದೇಶ ಸಂಖ್ಯೆ: ಎಆರ್-24:ಮಾರಾಟ:ಅಅನೇ:51:2002-03, ದಿನಾಂಕ: 14.11.2002.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ, ಇವರ ಪತ್ರ ಸಂಖ್ಯೆ: ಎಆರ್-24:ಸಮಾಪನೆ:ಸಿಆರ್-51:2002-03:174:ದಿನಾಂಕ: 23.5.2003.
3) ಸಂಘದ ಆಡಳಿತಾಧಿಕಾರಿ ನಿರ್ಣಯ ದಿನಾಂಕ: 2.6.2003.

**ಪೀಠಿಕೆ:-**

ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ. ಉಂಬ್ಳೇಬೈಲು, ಶಿವಮೊಗ್ಗ ತಾಲ್ಲೂಕು, ಇದರ ಪ್ರಥಮ ಆಡಳಿತ ಮಂಡಳಿ ಕರ್ನಾಟಕ ಸಹಕಾರ ಸಂಘಗಳ 1997ರ ತಿದ್ದುಪಡಿ ಕಾಯಿದೆ ಕಲಂ 29 (ಎಫ್) ರೀತ್ಯಾ ರಚನೆ ಆಗದ ಕಾರಣ, ಹಾಗೂ ಸಂಘದ ಉಪನಿಯಮ ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮ 14 ರನ್ವಯ ಚುನಾವಣೆಯನ್ನು ನಿಗದಿತ ಅವಧಿಯಲ್ಲಿ ಜರುಗಿಸದ ಕಾರಣ ಸಂಘದ ಆಡಳಿತವನ್ನು ನಡೆಸಲು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 28ಎ(5)ರ ಮೇರೆಗೆ ಆಡಳಿತಾಧಿಕಾರಿಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ರವರು 6 ತಿಂಗಳ ಅವಧಿಗೆ ನೇಮಿಸಿರುತ್ತಾರೆ. ಸಂಘದ ಆಡಳಿತಾಧಿಕಾರಿಯಾಗಿ ನೇಮಕಗೊಂಡ ಶ್ರೀ ಹೆಚ್.ಎಸ್. ಸತೀಶ್‌ಕುಮಾರ, ದ್ವಿತೀಯ ಸಹಾಯಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ, ಶಿವಮೊಗ್ಗ ರವರು ದಿನಾಂಕ: 26.12.2002 ರಂದು ಸಂಘದ ಪ್ರಭಾರವನ್ನು ಪಡೆದಿರುತ್ತಾರೆ. ಸಂಘದ 11 ಸದಸ್ಯರು ಸಹಿ ಮಾಡಿ ದಿನಾಂಕ: 28.3.2003 ರಂದು ಸಂಘದ ಸದಸ್ಯರಿಗೆ ಸಂಘ ಮುಂದುವರಿಯುವ ಬಗ್ಗೆ ಆಸಕ್ತಿ ಇಲ್ಲದಿರುವುದನ್ನು ಉಲ್ಲೇಖಿಸಿ ಉಲ್ಲೇಖ (1)ರ ಆದೇಶವನ್ನು ಸಮರ್ಥಿಸಿ, ಸಂಘದ ರದ್ದತಿಗಾಗಿ ಮನವಿ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ರವರು ಉಲ್ಲೇಖ (2)ರ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸಂಘದ ಆಡಳಿತಾಧಿಕಾರಿ ಸಲ್ಲಿಸಿರುವ ನಿರ್ಣಯದಿಂದ ಸಂಘದ ಮುಂದುವರಿಕೆ ಬಗ್ಗೆ ಸದಸ್ಯರ ನಿರಾಸಕ್ತಿ ದೃಢಪಡುತ್ತದೆ. ಈ ಹಿನ್ನೆಲೆಯಲ್ಲಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ನಿರ್ಣಯಿಸಿ ಈ ಆದೇಶವನ್ನು ಹೊರಡಿಸಿದೆ.

**ಆದೇಶ**

**ನಂ. ಡಿಆರ್‌ಎಸ್:ಕಾನೂನು-3:ಎಲ್‌ಕ್ಯೂಡಿ:14:2003-04, ದಿನಾಂಕ: 30ನೇ ಜೂನ್ 2003**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರು, ಕೆ. ಈಶ್ವರಸ್ವಾಮಿ, ಆದ ನಾನು ಕರ್ನಾಟಕ ಸಹಕಾರ ಸಂಘಗಳ 1959ರ ಕಾಯಿದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001:ದಿನಾಂಕ: 21.11.2001 ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸಿ, ಪೀಠಿಕೆಯಲ್ಲಿ ವಿವರಿಸಿದ ಕಾರಣಗಳಿಗಾಗಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿಯಮಿತ, ಉಂಬ್ಳೇಬೈಲು, ಶಿವಮೊಗ್ಗ ತಾಲ್ಲೂಕ್, ಈ ಸಂಘವನ್ನು ಸಮಾಪನೆಗೆ ಒಳಪಡಿಸಿ ಆದೇಶಿಸಿದ್ದೇನೆ.

ಕರ್ನಾಟಕ ಸಹಕಾರ ಸಂಘಗಳ 1959ರ ಕಾಯಿದೆ ಕಲಂ 73 ರನ್ವಯ ಶ್ರೀ ಹೆಚ್.ಎಸ್. ಸತೀಶ್ ಕುಮಾರ್, ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ರವರನ್ನು ಸಂಘದ ಸಮಾಪನಾಧಿಕಾರಿಯಾಗಿ ನೇಮಿಸಿದ್ದೇನೆ.

ನೇಮಕಗೊಂಡ ಸಮಾಪನಾಧಿಕಾರಿಯವರು 6 ತಿಂಗಳ ಅವಧಿಯೊಳಗೆ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವನೆಯನ್ನು ಸಲ್ಲಿಸತಕ್ಕದ್ದು.

ಕಚೇರಿಯ ಮೊಹರು ಹಾಗೂ ನನ್ನ ಸಹಿಯೊಂದಿಗೆ ದಿನಾಂಕ: 30ನೇ ಜೂನ್ 2003 ರಂದು ನೀಡಿದ್ದೇನೆ.

**ಕೆ. ಈಶ್ವರಸ್ವಾಮಿ**

ಪಿ.ಆರ್. 1249 ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ.

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

**ವಿಷಯ:** ನಿಷ್ಕ್ರಿಯಗೊಂಡಿರುವ ಖಜಾನೆ ಇಲಾಖೆ ಮತ್ತು ಇತರೇ ಇಲಾಖಾ ನೌಕರರ ಗೃಹನಿರ್ಮಾಣ ಸಹಕಾರ ಸಂಘ ನಿಯಮಿತ, ಶಿವಮೊಗ್ಗ, ಇದರ ಸಮಾಪನೆ - ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ-ವಿಭಾಗ, ಶಿವಮೊಗ್ಗ, ಇವರ ಪತ್ರ ಸಂಖ್ಯೆ: ಎಆರ್:24:ಸಮಾಪನೆ:ಸಿಆರ್-72:2003-04:796:ದಿನಾಂಕ: 26.8.2003.

**ಪೀಠಿಕೆ:-**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ-ವಿಭಾಗ, ಶಿವಮೊಗ್ಗ ರವರು ಉಲ್ಲೇಖಿತ ಪತ್ರದಲ್ಲಿ ಖಜಾನೆ ಇಲಾಖೆ ಮತ್ತು ಇತರೇ ಇಲಾಖಾ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಶಿವಮೊಗ್ಗ, ಇದರ ನಿಷ್ಕ್ರಿಯತೆ ಬಗ್ಗೆ ವರದಿಸಿರುತ್ತಾರೆ. ಸದ್ರಿ ವರದಿಯನ್ನು ಪರಿಶೀಲಿಸಿದಾಗ ಸಂಘದ ಸರ್ವಸದಸ್ಯರ ಸಭೆ ದಿನಾಂಕ: 15.9.2003 ರಂದು ನಿರ್ಣಯ ಸಂಖ್ಯೆ (8) ರಲ್ಲಿ ಸಂಘದ ಸಮಾಪನೆಗೆ ಪತ್ರ ವ್ಯವಹಾರ ನಡೆಸುವಂತೆ ಸಂಘದ ಅಧ್ಯಕ್ಷರು ಹಾಗೂ ಕಾರ್ಯದರ್ಶಿಗೆ ಅಧಿಕಾರ ನೀಡುವ ಬಗ್ಗೆ ನಿರ್ಣಯ ಅಂಗೀಕರಿಸಲಾಗಿದೆ. ಸದ್ರಿ ನಿರ್ಣಯದಲ್ಲಿ ಸಂಘದ ವತಿಯಿಂದ ನಿವೇಶನ ಪಡೆದ ಸದಸ್ಯರಿಗೆ ನೋಂದಣಿ ಸಂಬಂಧ ಬಾಕಿ ನೋಂದಣಿ ಕಾರ್ಯವನ್ನು ದಿನಾಂಕ: 31.3.2003 ರೊಳಗೆ ಪೂರ್ಣಗೊಳಿಸಿಕೊಳ್ಳಲು ಕಾಲಾವಕಾಶವನ್ನು ನೀಡಲಾಗಿದೆ. ಸಂಘದ ವತಿಯಿಂದ ನಿರ್ಣಯಿಸಿರುವ ನಿರ್ಣಯಗಳನ್ನು ಚೆಕ್‌ಲಿಸ್ಟ್ ಮಾಹಿತಿಯೊಂದಿಗೆ ಸಂಘದ ಸಮಾಪನೆಗೆ ಶಿಫಾರಸ್ ಮಾಡಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಉಲ್ಲೇಖ (1)ರ ಪ್ರಸ್ತಾವನೆ ಸಲ್ಲಿಸಿದ್ದಾರೆ. ಸಂಘದಲ್ಲಿ ಕರ್ನಾಟಕ ಸಹಕಾರ ಸಂಘಗಳ 1959ರ ಕಾಯಿದೆ ಕಲಂ 72, 2(ಎ) ಅನ್ವಯ ಸಂಘದಲ್ಲಿರಬೇಕಾದ ಕನಿಷ್ಠ ಸದಸ್ಯರ ಸಂಖ್ಯೆ: 10ಕ್ಕಿಂತ ಕಡಿಮೆ ಇರುವುದಾಗಿ ವರದಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಂಘವನ್ನು ಸಮಾಪನೆಗೆ ಆದೇಶಿಸುವುದು ಸೂಕ್ತವೆಂದು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಆದೇಶ**

**ನಂ. ಡಿಆರ್‌ಎಸ್:ಕಾನೂನು-3:ಎಲ್‌ಕ್ಯೂಡಿ:23:2003-04, ದಿನಾಂಕ: 30ನೇ ಸೆಪ್ಟೆಂಬರ್ 2003**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರು, ಕೆ. ಈಶ್ವರಸ್ವಾಮಿ, ಆದ ನಾನು ಕರ್ನಾಟಕ ಸಹಕಾರ ಸಂಘಗಳ 1959ರ ಕಾಯಿದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001:ದಿನಾಂಕ: 21.11.2001 ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸಿ, ಪೀಠಿಕೆಯಲ್ಲಿ ವಿವರಿಸಿದ ಕಾರಣಗಳಿಗಾಗಿ ಖಜಾನೆ ಇಲಾಖೆ ಮತ್ತು ಇತರೇ ಇಲಾಖಾ ನೌಕರರ ಗೃಹನಿರ್ಮಾಣ ಸಹಕಾರ ಸಂಘ ನಿಯಮಿತ, ಶಿವಮೊಗ್ಗ, ಈ ಸಂಘವನ್ನು ಸಮಾಪನೆಗೆ ಆದೇಶಿಸಿದ್ದೇನೆ.

ಕರ್ನಾಟಕ ಸಹಕಾರ ಸಂಘಗಳ 1959ರ ಕಾಯಿದೆ ಕಲಂ 73 ರ ಅನ್ವಯ ವಿಕ್ರಯಾಧಿಕಾರಿ, 1ನೇ ವೃತ್ತ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ರವರನ್ನು ಸಂಘದ ಸಮಾಪನಾಧಿಕಾರಿಯಾಗಿ ನೇಮಿಸಿದ್ದೇನೆ.

ನೇಮಕಗೊಂಡ ಸಮಾಪನಾಧಿಕಾರಿಯವರು ಕೂಡಲೇ ಸಂಘದ ಪ್ರಭಾರವನ್ನು ವಹಿಸಿಕೊಂಡು ಸಂಘದ ಸಮಾಪನಾ ನಡಾವಳಿಗಳನ್ನು ಸಹಕಾರ ಸಂಘಗಳ ಅಪರ ನಿಬಂಧಕರು, ಕೈಗಾರಿಕೆ ಮತ್ತು ಇತರೆ, ಇವರ ಸುತ್ತೋಲೆ ಸಂಖ್ಯೆ: ಆರ್‌ಸಿಎಸ್:ಎಲ್‌ಕ್ಯೂಡಿ:55:2002-03, ದಿನಾಂಕ: 5.2.2003 ರನ್ವಯ 3 ವರ್ಷಗಳ ಒಳಗೆ ಪೂರ್ಣಗೊಳಿಸಿ ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವೆ ಸಲ್ಲಿಸತಕ್ಕದ್ದು.

ಕಚೇರಿಯ ಮೊಹರು ಹಾಗೂ ನನ್ನ ಸಹಿಯೊಂದಿಗೆ ದಿನಾಂಕ: 30ನೇ ಜೂನ್ 2003 ರಂದು ನೀಡಿದ್ದೇನೆ.

**ಕೆ. ಈಶ್ವರಸ್ವಾಮಿ**
ಸಹಕಾರ ಸಂಘಗಳ ಉಪ-ನಿಬಂಧಕರು,
ಶಿವಮೊಗ್ಗ ಜಿಲ್ಲೆ ಶಿವಮೊಗ್ಗ.

ಪಿ.ಆರ್. 1250

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ವಿಷಯ:** ನಿಷ್ಕ್ರಿಯಗೊಂಡ ಸೇಕ್ರೆಡ್‌ಹಾರ್ಟ್ ಕ್ರೆಡಿಟ್ ಕೋ-ಆಪರೇಟೀವ್ ಸೊಸೈಟಿ ಲಿಮಿಟೆಡ್, ಶಿವಮೊಗ್ಗ, ಇದರ ಸಮಾಪನೆ - ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ, ಇವರ ಪತ್ರ ಸಂಖ್ಯೆ: ಎಆರ್-24: ಸಮಾಪನೆ: ಸಿಆರ್ 63: 2003-04: ದಿನಾಂಕ: 23.7.2003.

2) ಸಂಘದ ವಿಶೇಷಾಧಿಕಾರಿಯವರ ನಿರ್ಣಯ ದಿನಾಂಕ: 2.5.2003.

ಉಲ್ಲೇಖ (1)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ-ವಿಭಾಗ, ಶಿವಮೊಗ್ಗ ರವರು ಸೇಕ್ರೆಡ್‌ಹಾರ್ಟ್ ಕ್ರೆಡಿಟ್ ಕೋ-ಆಪರೇಟೀವ್ ಸೊಸೈಟಿ ಲಿಮಿಟೆಡ್, ಶಿವಮೊಗ್ಗ ಇದರ ನಿಷ್ಕ್ರಿಯತೆ ಬಗ್ಗೆ ವಾದಿಸಿರುತ್ತಾರೆ. ಸದ್ರಿ ವರದಿ ಅನುಸಾರ ಸಂಘದ 2001-02ನೇ ಸಾಲಿನ ಸರ್ವ ಸದಸ್ಯರ ಸಭೆಯನ್ನು ನಿಗದಿತ ಅವಧಿಯೊಳಗೆ ನಡೆಸದ ಕಾರಣ ಮಾರಾಟಾಧಿಕಾರಿ, 1ನೇ ವೃತ್ತ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ರವರನ್ನು ಸಂಘದ ಆಡಳಿತ ಮಂಡಳಿ ಸ್ಥಾನದಲ್ಲಿ ವಿಶೇಷಾಧಿಕಾರಿಯಾಗಿ ನೇಮಿಸಲಾಗಿದೆ.

ನೇಮಕಗೊಂಡ ವಿಶೇಷಾಧಿಕಾರಿ ದಿನಾಂಕ: 2.5.2003 ರಂದು ನಿರ್ಣಯ ಅಂಗೀಕರಿಸಿ ಸಂಘದ ಸಮಾಪನೆಗೆ ಶಿಫಾರಸ್ ಮಾಡಿರುತ್ತಾರೆ. ಸದ್ರಿ ನಿರ್ಣಯದ ಪ್ರಕಾರ ಸಂಘದ ಸದಸ್ಯರಿಗೆ ಸಂಘದ ಮುಂದುವರಿಕೆ ಬಗ್ಗೆ ಆಸಕ್ತಿ ಇಲ್ಲದಿರುವುದು ತಿಳಿದುಬರುತ್ತದೆ. ಸಂಘದ ಲೆಕ್ಕ ಪತ್ರಗಳು ಹಾಗೂ ದಾಖಲೆಗಳು ಲಭ್ಯವಿಲ್ಲದಿರುವ ಬಗ್ಗೆ ಸಹ ವಿಶೇಷಾಧಿಕಾರಿಯವರು ನಿರ್ಣಯದಲ್ಲಿ ಉಲ್ಲೇಖಿಸಿರುತ್ತಾರೆ. ಸಂಘದ ಆಡಳಿತ ಮಂಡಳಿ ಪುನರ್ ರಚನೆ ಸಾಧ್ಯವಾಗದ ಕಾರಣ ಸಂಘವನ್ನು ಇದೇ ಸ್ಥಿತಿಯಲ್ಲಿ ಮುಂದುವರೆಸುವುದರಿಂದ ಯಾವುದೇ ಪ್ರಯೋಜನ ಇಲ್ಲವೆಂದು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಆದೇಶ**

**ನಂ. ಡಿಆರ್‌ಎಸ್:ಎಲ್‌ಕ್ಯೂಡಿ:22:2003-04, ದಿನಾಂಕ: 30ನೇ ಸೆಪ್ಟೆಂಬರ್ 2003**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರು, ಕೆ. ಈಶ್ವರಸ್ವಾಮಿ, ಆದ ನಾನು ಕರ್ನಾಟಕ ಸಹಕಾರ ಸಂಘಗಳ 1959ರ ಕಾಯಿದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001:ದಿನಾಂಕ: 21.11.2001 ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸಿ ಪೀಠಿಕೆಯಲ್ಲಿ ವಿವರಿಸಿದ ಕಾರಣಗಳಿಗಾಗಿ ಸೇಕ್ರೆಡ್‌ಹಾರ್ಟ್ ಕ್ರೆಡಿಟ್ ಕೋ-ಆಪರೇಟೀವ್ ಸೊಸೈಟಿ ಲಿಮಿಟೆಡ್, ಶಿವಮೊಗ್ಗ ಈ ಸಂಘವನ್ನು ಸಮಾಪನೆಗೆ ಆದೇಶಿಸಿದ್ದೇನೆ.

ಕರ್ನಾಟಕ ಸಹಕಾರ ಸಂಘಗಳ 1959ರ ಕಾಯಿದೆ ಕಲಂ 73 ರನ್ವಯ ಮಾರಾಟಾಧಿಕಾರಿ 1ನೇ ವೃತ್ತ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ, ರವರನ್ನು ಸಂಘದ ಸಮಾಪಾನಾಧಿಕಾರಿಯಾಗಿ ನೇಮಿಸಿದ್ದೇನೆ.

ನೇಮಕಗೊಂಡ ಸಮಾಪನಾಧಿಕಾರಿಯವರು ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಇವರ ಸುತ್ತೋಲೆ ದಿನಾಂಕ: 5.2.2003 ರ ಪ್ರಕಾರ ಸಂಘದ ಸಮಾಪನಾ ನಡಾವಳಿಗಳನ್ನು ಪೂರ್ಣಗೊಳಿಸಿ, ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವೆಯನ್ನು ಸಲ್ಲಿಸುವುದು.

ಕಚೇರಿಯ ಮೊಹರು ಹಾಗೂ ನನ್ನ ಸಹಿಯೊಂದಿಗೆ ದಿನಾಂಕ: 30ನೇ ಸೆಪ್ಟೆಂಬರ್ 2003 ರಂದು ನೀಡಿದ್ದೇನೆ.

**ಕೆ. ಈಶ್ವರಸ್ವಾಮಿ**

ಪಿ.ಆರ್. 1251 ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-6**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**
**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎಫ್‌ಸಿ:ಸಿಆರ್-9:2003**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಶ್ರೀ ಎಂ. ನಾಗರಾಜ ಲೇಟ್ ಮುನಿಯಪ್ಪರವರ ಮಗ ವಯಸ್ಸು ಸುಮಾರು 19 ವರ್ಷ<br>2) ಕು: ಸರೋಜ ಲೇಟ್ ಮುನಿಯಪ್ಪರವರ ಮಗಳು ವಯಸ್ಸು ಸುಮಾರು 21 ವರ್ಷ<br>3) ಕು: ನಾರಾಯಣಮ್ಮ ಲೇಟ್ ಮುನಿಯಪ್ಪರವರ ಮಗಳು ವಯಸ್ಸು ಸುಮಾರು 23 ವರ್ಷ<br>ವಾಸ: ಮಾಯಸಂದ್ರ ವಿಲೇಜ್, ಆನೇಕಲ್ ತಾ: ಬೆಂಗಳೂರು ಜಿಲ್ಲೆ. | | 1) ಮುನಿಸ್ವಾಮಿ ಬಿನ್ ನಂಜಪ್ಪ, ಬಂತಹಳ್ಳಿ, ಡಿ.ಎನ್. ದೊಡ್ಡಿ ಪೋಸ್ಟ್, ಮಾಲೂರು ತಾ:, ಕೋಲಾರ ಜಿಲ್ಲೆ<br>2) ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂಪನಿ ಲಿಮಿಟೆಡ್, ರೀಜನಲ್ ಆಫೀಸ್, ಪಿ.ಬಿ. ನಂ. 5340, ನಂ. 25, 1ನೇ ಮಹಡಿ, ಶಂಕರನಾರಾಯಣ ಬಿಲ್ಡಿಂಗ್, ಎಂ.ಜಿ. ರಸ್ತೆ, ಬೆಂಗಳೂರು-1. |

**ಪ್ರಕಟಣೆ ದಿನಾಂಕ: 31ನೇ ಅಕ್ಟೋಬರ್ 2003**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 24.3.2003 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಎ. ಶ್ರೀನಿವಾಸ, ವಯಸ್ಸು ಸುಮಾರು 25 ವರ್ಷ ಅವರು ಮೇಲೆ ವಿಳಾಸಿಸಿರುವ ಒಂದನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,

ಪಿ.ಆರ್. 1254 ಉಪ ವಿಭಾಗ-6, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-6**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**
**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎಫ್‌ಸಿ:ಸಿಆರ್-14:2003**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಶ್ರೀ ತಿಮ್ಮಾಶೆಟ್ಟಿ, ಶ್ರೀ ಲೇಟ್ ಚಿಕ್ಕರಂಗರವರ ಮಗ ವಯಸ್ಸು ಸುಮಾರು 50 ವರ್ಷ<br>2) ಶ್ರೀಮತಿ ಪುಟ್ಟಮ್ಮ, ಶ್ರೀ ತಿಮ್ಮಾಶೆಟ್ಟಿ ಯವರ ಹೆಂಡತಿ ವಯಸ್ಸು ಸುಮಾರು 45 ವರ್ಷ<br>ವಾಸ: ಅದನಕುಪ್ಪೆ, ಕಸಬ ಹೋಬಳಿ, ಕನಕಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. | | 1) ಶ್ರೀ ಅಫ್‌ಸರ್ ಬಿನ್ ಸೈಯದ್ ಮಸ್ತಾನ್ ಸಾಬ್, ನಂ. 397, 7ನೇ ಮುಖ್ಯ ರಸ್ತೆ, ಕಾವೇರಿನಗರ, ಬನಶಂಕರಿ 2ನೇ ಹಂತ, ಬೆಂಗಳೂರು.<br>2) ಮೆ: ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂಪನಿ, ಡಿ.ಒ. 10, ನಂ. 21, ಸೆಂಟ್ ಪ್ಯಾಟ್ರಿಕ್ಸ್ ಚರ್ಚ್ ಬಿಲ್ಡಿಂಗ್, ಮ್ಯೂಸಿಯಂ ರಸ್ತೆ, ಬೆಂಗಳೂರು-25. |

**ಪ್ರಕಟಣೆ ದಿನಾಂಕ: 4ನೇ ನವೆಂಬರ್ 2003**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 20.6.2003 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಟಿ. ಕೃಷ್ಣಪ್ಪ, ವಯಸ್ಸು ಸುಮಾರು 24 ವರ್ಷ ಅವರು ಮೇಲೆ ವಿಳಾಸಿಸಿರುವ ಒಂದನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ಪಿ.ಆರ್. 1255 ಉಪ ವಿಭಾಗ-6, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-6**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**
**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎಎಫ್‌ಸಿ:ಸಿಆರ್-3:2003**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1) ದೊರೆಸ್ವಾಮಿ ಬಿನ್ ಮೊದಲಮಣಿ
ವಯಸ್ಸು ಸುಮಾರು 55 ವರ್ಷ
2) ಶ್ರೀಮತಿ ಮುನಿಲಕ್ಷ್ಮಿ ದೊರೆಸ್ವಾಮಿಯವರ
ಹೆಂಡತಿ, ವಯಸ್ಸು ಸುಮಾರು 40 ವರ್ಷ
ವಾಸ: ಅಂಬರದಪಲ್ಲಿ ವಿಲೇಜ್ ಗಂಗ ನಲ್ಲೂರು
ಮಂಡಲ, ಮಹದೇವ ಮಂಡಲ (ಪೋ),
ಚಿತ್ತೂರು ಡಿಸ್ಟ್ರಿಕ್ಟ್, ಆಂಧ್ರಪ್ರದೇಶ.

1) ಶ್ರೀ ಮುನಿರೆಡ್ಡಿ ಬಿನ್ ಚಿಕ್ಕ ಅಬ್ಬಯ್ಯ ರೆಡ್ಡಿ,
ನಂ. 337, 22ನೇ ಮೈನ್, 2ನೇ ಕ್ರಾಸ್,
ಬಿಟಿಎಂ ಲೇಔಟ್, ಬೆಂಗಳೂರು-76.
2) ದಿ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ.
ಲಕ್ಷ್ಮಿ ಟವರ್ಸ್, ನಂ. 200:3, 1ನೇ ಮಹಡಿ,
ಆರ್.ವಿ. ರಸ್ತೆ, ಬೆಂಗಳೂರು-4.

**ಪ್ರಕಟಣೆ ದಿನಾಂಕ: 23ನೇ ಅಕ್ಟೋಬರ್ 2003**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 20.1.2003 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಅಮೂಲ್, ವಯಸ್ಸು ಸುಮಾರು 20 ವರ್ಷ ಅವರು ಮೇಲೆ ವಿಳಾಸಿಸಿರುವ ಒಂದನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ಪಿ.ಆರ್. 1256 ಉಪ ವಿಭಾಗ-6, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-6**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**
**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎಎಫ್‌ಸಿ:ಸಿಆರ್-2:2003**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1) ಅಶ್ವಥಮ್ಮ ಲೇಟ್ ಕೃಷ್ಣಪ್ಪರವರ ಹೆಂಡತಿ,
ವಯಸ್ಸು ಸುಮಾರು 60 ವರ್ಷ
ವಾಸ: ನಂ. 20:2, 1ನೇ ಮೈನ್, 3ನೇ ಕ್ರಾಸ್,
ವಿನಾಯಕನಗರ, ಆಡುಗೋಡಿ,
ಬೆಂಗಳೂರು-30

ಶ್ರೀ ಶ್ರೀನಿವಾಸ, ನಂ. 40, 2ನೇ ಕ್ರಾಸ್,
ಅಯ್ಯಪ್ಪ ಗಾರ್ಡನ್, ಬೆಂಗಳೂರು-560 030.

2) ಕೆ. ಗಣೇಶ್ ಬಿನ್ ಲೇಟ್ ಕೃಷ್ಣಪ್ಪ, ವಯಸ್ಸು 29 ವರ್ಷ, ನಂ. 20:2, 1ನೇ ಮೈನ್ 3ನೇ ಕ್ರಾಸ್, ವಿನಾಯಕನಗರ, ಆಡುಗೋಡಿ, ಬೆಂಗಳೂರು-30

**ಪ್ರಕಟಣೆ ದಿನಾಂಕ: 28ನೇ ಅಕ್ಟೋಬರ್ 2003**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 4.10.1999 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಕೆ. ಗಂಗಾಧರ, ವಯಸ್ಸು ಸುಮಾರು 27 ವರ್ಷ ಅವರು ಮೇಲೆ ವಿಳಾಸಿಸಿರುವ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ಉಪ ವಿಭಾಗ-6, ಬೆಂಗಳೂರು.

ಪಿ.ಆರ್. 1257

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-6**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**
**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎಫ್‌ಸಿ:ಸಿಆರ್-21:2003**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1) ಶ್ರೀಮತಿ ಶೋಭಾ, ಲೇಟ್ ಶ್ರೀನಿವಾಸ್‌ರವರ ಹೆಂಡತಿ, ವಯಸ್ಸು ಸುಮಾರು 21 ವರ್ಷ, ನಂ. 24, ಕೆಎಸ್‌ಆರ್‌ಟಿಸಿ ಕ್ವಾರ್ಟರ್ಸ್, ವಿಲ್ಸನ್‌ಗಾರ್ಡನ್, ಬೆಂಗಳೂರು-27
2) ಶ್ರೀ ತಿಮ್ಮರಾಯಪ್ಪ ಬಿನ್ ಲೇಟ್ ಮುನಿಸ್ವಾಮಿ, ವಯಸ್ಸು ಸುಮಾರು 50 ವರ್ಷ
3) ಶ್ರೀಮತಿ ಪಾಪಮ್ಮ ಶ್ರೀ ತಿಮ್ಮರಾಯಪ್ಪರವರ ಹೆಂಡತಿ, ವಯಸ್ಸು ಸುಮಾರು 45 ವರ್ಷ

ವಾಸ: ಸುಭಾಷ್‌ನಗರ, ಶಂಕರ್‌ನಾಗ್ ಎಸ್ಟೇಟ್ ಹಿಂಭಾಗ, ಬೇಗೂರು ಹೋಬಳಿ, ಬೆಂಗಳೂರು.

1) ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ. ಯೂನಿಟಿ ಬಿಲ್ಡಿಂಗ್, ಮಿಷನ್ ರಸ್ತೆ, ಬೆಂಗಳೂರು-27.
2) ಶ್ರೀ ವಿ. ಆನಂದಜ್ಯೋತಿ ಬಿನ್ ವೆಂಕಟಸ್ವಾಮಿ, ನಂ. 12:4, ಪೂರ್ಣಪ್ರಜ್ಞ ಲೇಔಟ್, ಬಿಎಸ್‌ಕೆ 2ನೇ ಹಂತ, 2ನೇ ಮುಖ್ಯ ರಸ್ತೆ, ಕತ್ರಿಗುಪ್ಪೆ, ಬೆಂಗಳೂರು-85

**ಪ್ರಕಟಣೆ ದಿನಾಂಕ: 23ನೇ ಅಕ್ಟೋಬರ್ 2003**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 26.3.2002 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಶ್ರೀನಿವಾಸ್, ಸುಮಾರು 24 ವರ್ಷ ವಯಸ್ಸು ಅವರು ಮೇಲೆ ವಿಳಾಸಿಸಿರುವ ಎರಡನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ಪರಿಹಾರ ಆಯುಕ್ತರು,
ಉಪ ವಿಭಾಗ-6, ಬೆಂಗಳೂರು.

ಪಿ.ಆರ್. 1259

**ಜಿಲ್ಲಾ ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**

**ಪ್ರಕಟಣೆ**

**ಪ್ರಕರಣ ಸಂಖ್ಯೆ: ಕಾಅಕೊ:ಮಪ್ರ:128:2003, ದಿನಾಂಕ: 30ನೇ ಅಕ್ಟೋಬರ್ 2003**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1) ಶ್ರೀಮತಿ ರೇಣುಕಾ ಗಂಡ ಪರಸಪ್ಪ ಆಚಾರಿ<br>ಸಾ: ಕುಷ್ಟಗಿ<br>2) ರಾಜಪ್ಪ ತಂದೆ ಪರಸಪ್ಪ<br>3) ಜ್ಯೋತಿ ತಂದೆ ಪರಸಪ್ಪ<br>4) ವಿಜಯಲಕ್ಷ್ಮಿ ತಂದೆ ಪರಸಪ್ಪ<br>5) ಬಾಳಮ್ಮ ಗಂಡ ದೊಡ್ಡಪ್ಪ ಆಚಾರಿ<br>ಸಾ: ಕುಷ್ಟಗಿ ಜಿ: ಕೊಪ್ಪಳ | | 1) ಶ್ರೀ ಜಿ.ವಿ. ಕುಮಾರ, ಯನಗನಹಳ್ಳಿ,<br>ತಾ: ನೆಲಮಂಗಲ, ಬೆಂಗಳೂರು ಗ್ರಾಮಾಂತರ<br>ಜಿಲ್ಲೆ ಲಾರಿ ಮಾಲೀಕ ನಂ. ಕೆಎ 02 ಡಿ 4545<br>2) ದಿ ಡಿವಿಜನಲ್ ಮ್ಯಾನೇಜರ್,<br>ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ.<br>ರಾಯಚೂರು. |

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಶ್ರೀ ಪರಸಪ್ಪ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೃತ ಹೆಂಡತಿ ಹಾಗೂ ಮಕ್ಕಳಾದ ಶ್ರೀಮತಿ ರೇಣುಕಾ ಗಂಡ ಪರಸಪ್ಪ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರು ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್. 1261

**ಜಿಲ್ಲಾ ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**

**ಪ್ರಕಟಣೆ**

**ಪ್ರಕರಣ ಸಂಖ್ಯೆ: ಕಾಅಕೊ:ಕಾನಪ: 129:ಡಿಸಿ:2003, ದಿನಾಂಕ: 5ನೇ ನವೆಂಬರ್ 2003**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1) ಶ್ರೀಮತಿ ಮರಿಯವ್ವ ಗಂಡ ಶಿವಪ್ಪ ಪೂಜಾರಿ<br>ಸಾ: ದದೇಗಲ್ಲ ತಾ:ಜಿ: ಕೊಪ್ಪಳ<br>2) ಶ್ರೀ ಶಿವಪ್ಪ ತಂದೆ ದುರ್ಗಪ್ಪ ಪೂಜಾರಿ<br>ಸಾ: ದದೇಗಲ್ಲ ತಾ:ಜಿ: ಕೊಪ್ಪಳ | | 1) ಶ್ರೀ ಸಿದ್ದನಗೌಡ ತಂದೆ ಲಿಂಗನಗೌಡ ಮಾಲೀ<br>ಪಾಟೀಲ ಸಾ: ಬಹಾರಪೇಟ ರಸ್ತೆ, ಕೊಪ್ಪಳ<br>2) ಡಿವಿಜನಲ್ ಮ್ಯಾನೇಜರ್, ಯುನೈಟೆಡ್<br>ಇಂಡಿಯಾ ಇನ್ಸೂರೆನ್ಸ್ ಕಂ.ಲಿ. ಸ್ಟೇಶನ್ ರಸ್ತೆ,<br>ಹೊಸಪೇಟೆ, ಜಿ: ಬಳ್ಳಾರಿ. |

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಶ್ರೀ ಮರಿಯಪ್ಪ ಪೂಜಾರಿ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ: 30.7.2003 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೃತ ತಾಯಿ, ತಂದೆಯರಾದ ಶ್ರೀಮತಿ ಮರಿಯವ್ವ ಹಾಗೂ ಶಿವಪ್ಪ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರು ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್. 1262

**ಅಧಿಕಾರಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಹಳಿಯಾಳ ವಿಭಾಗ, ಹಳಿಯಾಳ ರವರ ನ್ಯಾಯಾಲಯ ಅಂತಿಮ ಆದೇಶ.**

**ಸಂಖ್ಯೆ: ಎಫ್‌ಓಸಿ/ಎಫ್‌ಓಪಿ/ವಾಹನ/ಮುಟ್ಟುಗೋಲು/2003-04 ದಿನಾಂಕ: 7ನೇ ಅಕ್ಟೋಬರ್ 2003**

**ವಿಷಯ:** ಅನಧಿಕೃತವಾಗಿ ಅರಣ್ಯ ಉತ್ಪತ್ತಿಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುವ ಕುರಿತು ಅಂತಿಮ ಆದೇಶ ಮಾಡುವ ಕುರಿತು.

**ಉಲ್ಲೇಖ:** 1) ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71 (ಎ) ಪ್ರಕಾರ ವಾಹನಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಬಗ್ಗೆ ಈ ಕಚೇರಿ ನ್ಯಾಯಾಲಯದಿಂದ ಹೊರಡಿಸಿದ ಆದೇಶ ದಿನಾಂಕ: 6.8.2003.

2) ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡ ದಿನಾಂಕ: 28.8.2003.

ಈ ವಿಭಾಗದಲ್ಲಿ ಸಾಗವಾನಿ ಸೀಸಂ ಹಾಗೂ ಇತರೇ ಅರಣ್ಯ ಉತ್ಪತ್ತಿ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿದ ವಾಹನಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಸಲುವಾಗಿ ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71(ಎ) ದಿಂದ 71(ಜಿ) ರವರೆಗೆ ಅನುಗುಣವಾಗಿ ಈ ನ್ಯಾಯಾಲಯದಲ್ಲಿ ನಡುವಳಿಕೆಗಳನ್ನು ನಡೆಸಿ ದಿನಾಂಕ: 6.8.2003 ರಂದು ಆದೇಶ ಹೊರಡಿಸಿ ಈ ಕೆಳಕಂಡ ವಾಹನಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಸೂಚನೆ ಹೊರಡಿಸಲಾಗಿತ್ತು. ಈ ಕೆಳಕಂಡ ವಾಹನ ಮತ್ತು ಅರಣ್ಯ ಉತ್ಪತ್ತಿ ಸಂಬಂಧದಲ್ಲಿ ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71 (ಡಿ) ಪ್ರಕಾರ ಯಾವುದೇ ಹಕ್ಕು ಭಾದ್ಯತೆ ರುಜುವಾತುಪಡಿಸಲು ಅಪೇಕ್ಷಿಸಿದ ವ್ಯಕ್ತಿಯು ಈ ಪ್ರಕಟಣೆ ಪ್ರಕಟಿಸಿದ 30 ದಿನಗಳ ಒಳಗಾಗಿ ಸಂಬಂಧಿಸಿದ ಸತ್ರ ಜಿಲ್ಲಾ ನ್ಯಾಯಾಲಯದ ಮುಂದೆ ಹಾಜರಾಗಿ ಹಕ್ಕು ಭಾದ್ಯತೆ ಮತ್ತು ಮಾಲಿಕತ್ವವನ್ನು ರುಜುವಾತುಪಡಿಸಲು ತಿಳಿಸಲಾಗಿತ್ತು. ಸದರಿ ಪ್ರಕಟಣೆ ಪ್ರಕಟಗೊಂಡ 30 ದಿನಗಳ ಒಳಗಾಗಿ ಯಾವುದೇ ಅಹವಾಲು ಇಲ್ಲದಿದ್ದಲ್ಲಿ ಸರಕಾರದ ಪರವಾಗಿ ಈ ಕೆಳಕಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದೆಂದು ಸಹ ತಿಳಿಸಲಾಗಿತ್ತು. ಈ ಆದೇಶವನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 28.8.2003 ರಂದು ಭಾಗ 3ರ ಪುಟ ಸಂಖ್ಯೆ 1287 ರಲ್ಲಿ ಪ್ರಕಟಿಸಲಾಗಿದೆ.

ಮೇಲ್ಕಂಡ ಪ್ರಕಟಣೆ ಪ್ರಕಟಗೊಂಡ 30 ದಿನಗಳ ಒಳಗಾಗಿ ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71(ಡಿ) ಪ್ರಕಾರ ಯಾವುದೇ ಅಹವಾಲುಗಳು ಸಂಬಂಧಿಸಿದ ಜಿಲ್ಲಾ ಸತ್ರ ನ್ಯಾಯಾಲಯದಲ್ಲಿ ದಾಖಲಾಗಿರುವ ಕುರಿತು ಹಾಗೂ ಮಾನ್ಯ ಜಿಲ್ಲಾ ಸತ್ರ ನ್ಯಾಯಾಲಯದಿಂದ ಯಾವುದೇ ನಿರ್ದೇಶನ ಬಂದಿಲ್ಲವಾಗಿರುವುದರಿಂದಲೂ ಸದರಿ ವಾಹನದ ವಾರಸುದಾರರು ಈ ಅರಣ್ಯ ಅಪರಾಧದಲ್ಲಿ ಭಾಗಿಯಾಗಿಲ್ಲವೆಂದು ರುಜುವಾತುಪಡಿಸಿಲ್ಲವಾದುದರಿಂದ ಅರಣ್ಯ ಅಪರಾಧದಲ್ಲಿ ಭಾಗಿಯಾಗಿರುತ್ತಾರೆಂದು ತಿಳಿದು ಬರುತ್ತದೆ. ಆದ್ದರಿಂದ ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71(ಎಫ್) ರ ಪ್ರಕಾರ ಈ ನ್ಯಾಯಾಲಯದ ದಿನಾಂಕ: 6.8.2003 ರ ಆದೇಶವನ್ನು ಸ್ಥಿರೀಕರಿಸಿ ಈ ಕೆಳಗಿನಂತೆ ಅಂತಿಮ ಆದೇಶ ಮಾಡಿದೆ.

**ಆದೇಶ**

ಈ ಕೆಳಕಂಡ ವಾಹನ ಮತ್ತು ಜಪ್ತಿ ಪಡಿಸಿದ ಅರಣ್ಯ ಉತ್ಪನ್ನವನ್ನು ಈ ಆದೇಶದ ಮೂಲಕ ಅಂತಿಮವಾಗಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಈ ಆದೇಶದನ್ವಯ ಈ ಕೆಳಕಂಡ ವಾಹನ ಮತ್ತು ಮುಟ್ಟುಗೋಲುಪಡಿಸಿದ ಅರಣ್ಯ ಉತ್ಪನ್ನದ ಮೇಲೆ ಈ ದಿನದಿಂದ ಯಾವ ವ್ಯಕ್ತಿಗೂ ಯಾವುದೇ ರೀತಿಯ ಹಕ್ಕು (ಕರ್ನಾಟಕ ಸರಕಾರ ಹೊರತುಪಡಿಸಿ) ಇರುವುದಿಲ್ಲ ಎಂದು ಈ ಮೂಲಕ ಘೋಷಿಸಲಾಗಿದೆ.

**ನಮೂನೆ**

| ಅ. ನಂ. | ವಾಹನ ಮಾದರಿ | ವಾಹನ ಸಂಖ್ಯೆ | ಸರಕಾರಕ್ಕೆ ಮುಟ್ಟುಗೋಲು ಮಾಡಿಕೊಂಡ ಅರಣ್ಯ ಉತ್ಪನ್ನ | ಇಂಜಿನ್ ನಂ. | ಚಾಸೀಸ್ ನಂ. |
|---|---|---|---|---|---|
| 1 | ಮಹೇಂದ್ರ ಜೀಪ್ | GA-01/B-5908 | ಸಿಸಂ ನಗ 10=0.797 ಘ.ಮೀ. | DR-51329 | GDR-650-DI-2WD DR-51329 |
| 2 | ಆಟೋರಿಕ್ಷಾ | MEZ-6088 | ಸಾಗ ಕೊರೆದ ನಗ 9=0.097 ಘ.ಮೀ. | 24E-8111-009108 | 24C-8111-0927 |
| 3 | ಟ್ರಕ್ | KA-30/873 | ಸಿಸಂ ನಗ 17=2.370 | 2523-01100507 PDC-38/0491 | 344073-7-23105 |
| 4 | ಟ್ರಕ್ | MEH-4159 | ಸಾಗವಾನಿ ನಗ 11=4.707 | ALSF-17272 | ALSF-159132 |

ದಿನಾಂಕ: 7.10.2003 ರಂದು ಈ ನ್ಯಾಯಾಲಯದ ಮೊಹರಿನೊಂದಿಗೆ ಮತ್ತು ಸಹಿಯೊಂದಿಗೆ ಈ ಆದೇಶವನ್ನು ಬಿಡುಗಡೆ ಮಾಡಿರುತ್ತೇನೆ.

**ರಾಮಚಂದ್ರ, ಭಾ.ಅ.ಸೇ.**
ಅಧಿಕೃತ ಅಧಿಕಾರಿಗಳು
ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು
ಹಳಿಯಾಳ ವಿಭಾಗ, ಹಳಿಯಾಳ.

ಪಿ.ಆರ್. 1263

## ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ಅಮೊ.ವಾಹನ. 40/2002-03, ದಿನಾಂಕ: 7ನೇ ನವೆಂಬರ್ 2003

**ಉಪಸ್ಥಿತರು:** ಶ್ರೀ ಶಿವರಾಜ್ ಸಿಂಗ್, ಭಾ.ಅ.ಸೇ. ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾದಿದಾರರು:** ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ

**ಆರೋಪಿಗಳು:** ಪತ್ತೆಯಾಗಿರುವುದಿಲ್ಲ.

**ಭಾದ್ಯತೆದಾರರು:** 1) ಯಾರು ಬಂದಿಲ್ಲ.

**ಪ್ರಸ್ತಾವನೆ:**

ದಿ: 13.12.2002 ರಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಮತ್ತು ಇವರ ಸಿಬ್ಬಂದಿಯವರು ಸಾಗರ ತಾಲ್ಲೂಕು, ಆನಂದಪುರಂ ಹೋಬಳಿ, ಶಿಕಾರಿಪುರದಿಂದ ಆನಂದಪುರಕ್ಕೆ ಬರುವ ಪಿ.ಡಬ್ಲ್ಯೂಡಿ ರಸ್ತೆಯಲ್ಲಿ ನರಸಾಪುರ ಬಸ್ ಸ್ಟಾಪ್ ಹತ್ತಿರ ಕಾಯುತ್ತಿರುವಾಗ ಒಂದು ಬಿಳಿ ಬಣ್ಣದ ಟ್ರ್ಯಾಕ್ಸ್ ಕೆಎ-15-ಎಂ-96 ಬರುತ್ತಿರುವುದನ್ನು ನಿಲ್ಲಿಸದೆ ವೇಗವಾಗಿ ಚಲಿಸಿದಾಗ ಅದನ್ನು ಇಲಾಖಾ ವಾಹನದಿಂದ ಬೆನ್ನಟ್ಟಿದಾಗ ಈ ವಾಹನವನ್ನು ಮೇಲ್ಕಂಡ ಸ್ಥಳದಲ್ಲಿ ನಿಲ್ಲಿಸಿ ಆಸಾಮಿಗಳು ವಾಹನದಿಂದ ಕೆಳಗಿಳಿದು ಓಡಲು ಪ್ರಾರಂಭಿಸಿದರು. ಅವರನ್ನು ಹಿಡಿಯಲು ಪ್ರಯತ್ನಿಸಿದರೂ ಕೈಗೆ ಸಿಗದೆ ಪರಾರಿಯಾಗಿರುತ್ತಾರೆ. ಈ ವಾಹನದ ಒಳಗಡೆ ಬೀಟೆ ನಾಟಾ 13=0.585ಎ03 ಇದ್ದು, ಅವುಗಳ ಮೇಲೆ ಯಾವುದೇ ಇಲಾಖಾ ಚಾಪಾವಾಗಲೀ ಸಾಗಿಸಲು ರಹದಾರಿಯಾಗಲೀ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು ಬೀಟೆ ನಾಟಾಗಳನ್ನು ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ), 63, 74, 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 163, 165ರ ಪ್ರಕಾರ ಅ.ಮೊ. ಸಂ. 27/2002-03 ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿದೆ.

ನಂತರ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿ: 15.2.2003 ರಂದು 30 (ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ ಬೆಂಗಳೂರು ಮತ್ತು ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಯಿತು. ಈ ಪ್ರಕಟಣೆಯ ದಿ: 13.3.2003 ರಂದು ವಿಜಯ ಕರ್ನಾಟಕ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಸ್ಪಷ್ಟವಾಗಿರುತ್ತದೆ. ಈ ಪ್ರಕರಣದಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರೂ ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರ್ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತುಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

### ಆದೇಶ

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಶಿವರಾಜ್ ಸಿಂಗ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂಕ್ಷಣಾಧಿಕಾರಿ ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಬಿಳಿ ಬಣ್ಣದ ಟೆಂಪೋಟ್ರ್ಯಾಕ್ಸ್ ನಂ. ಕೆಎ-15-ಎಂ-96, ಚಾಸಿಸ್ ನಂ. ಇಲ್ಲ. ಇಂಜಿನ್ ನಂ. ಇಲ್ಲ ಮತ್ತು ಈ ವಾಹನದಲ್ಲಿದ್ದ ಬೀಟೆ ನಾಟಾ 13=0.585ಎಂ3 ಯು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ವಾಹನದ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ: 4.11.2003 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರೂ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ

ಪಿ.ಆರ್. 1264 ಸಾಗರ ವಿಭಾಗ, ಸಾಗರ

## ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಇವರ ಕಾರ್ಯಾಲಯ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಬಿ) ನ ರೀತ್ಯಾ ಕಾರಣ ಕೇಳಿ ನೋಟೀಸು ನಂ. ಇಎಕ್ಸ್‌ಇ/ಸಿಓಎನ್/ಡಿಟಿಸಿಆರ್/811/2002-03, ದಿನಾಂಕ: 7ನೇ ನವೆಂಬರ್ 2003

**ವಿಷಯ:** ಮೊಕದ್ದಮೆಯಲ್ಲಿ ಇಲಾಖೆಗೆ ವಶಪಡಿಸಿಕೊಂಡ ಮದ್ಯ ಮತ್ತು ವಾಹನವನ್ನು ಏಕೆ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂಬ ಬಗ್ಗೆ.

**ಉಲ್ಲೇಖ:** ಅಬಕಾರಿ ಸಬ್ ಇನ್ಸ್‌ಪೆಕ್ಟರ್ ಇಐಬಿ ಬೆಳಗಾಂವ ಇವರ ಪ್ರಥಮ ವರ್ತಮಾನ ವರದಿ ಸಂ: 7:2002-03, ದಿನಾಂಕ: 10.5.2003.

ಅಬಕಾರಿ ಸಬ್ ಇನ್‌ಸ್ಪೆಕ್ಟರ್ ಇಐಬಿ ಬೆಳಗಾಂವ ಇವರು ಬೆಳಗಾಂವ ನಗರ ವ್ಯಾಪ್ತಿಯಲ್ಲಿ ಬರುವ ರಾಷ್ಟ್ರೀಯ ಹೆದ್ದಾರಿ ನಂ. 4 ರ ಮೇಲೆ ಗಾಂಧಿನಗರ ಕ್ರಾಸ್ ಹತ್ತಿರ ಇರುವ ರೈಲ್ವೆ ಸೇತುವೆ ಹತ್ತಿರ ಒಂದು ಟ್ರಕ್ ನಂ. ಎಂವೈಎಂ-6562 ನೇದ್ದರ ಮೇಲೆ 610 ಬಾಕ್ಸ್ (5298.480 ಬಿ.ಎಲ್. ಮದ್ಯವನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ ಸಿಕ್ಕ ಅಪರಾಧಕ್ಕಾಗಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 10, 11, 12, 14, 34 ಮತ್ತು ಶಿಕ್ಷಾರ್ಹ ಕಲಂ 38(ಎ) ರ ಪ್ರಕಾರ ಗುನ್ಹೆ ದಾಖಲು ಮಾಡಿ ವಾಹನ ಮತ್ತು ಮದ್ಯವನ್ನು ಜಪ್ತಿ ಮಾಡಿರುತ್ತಾರೆ. ಸದರಿ ಪ್ರಕರಣದ ಮುಟ್ಟುಗೋಲು ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿರುತ್ತಾರೆ.

ಮೇಲ್ಕಾಣಿಸಿದ ಮೊಕದ್ದಮೆಯಲ್ಲಿ ಸರಕಾರಕ್ಕೆ ಕರ ಕೊಡದೆ ಮದ್ಯವನ್ನು ಸಾಗಾಟ ಮಾಡುತ್ತಿರುವುದು ತುಂಬಾ ಗುರುತರವಾದ ಅಪರಾಧವಾಗಿದ್ದು ಈ ಕೃತ್ಯಕ್ಕೆ ಈ ಮೊಕದ್ದಮೆಯಲ್ಲಿ ಇಲಾಖೆಗೆ ವಶಪಡಿಸಿಕೊಂಡಿರುವ ವಾಹನ ಟ್ರಕ್ ಸಂ. ಎಂವೈಎಂ-6562 ಹಾಗೂ 610 ಪೆಟ್ಟಿಗೆ ಮದ್ಯವನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಎ) ನ ರೀತ್ಯ ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ತಿಳಿಸುತ್ತ, ಈ ವಿಚಾರದಲ್ಲಿ ನಿಮ್ಮಗಳ ಹೇಳಿಕೆ ಏನಾದರೂ ಇದ್ದಲ್ಲಿ ಈ ನೋಟೀಸು ಗೆಜೆಟ್ಟಿನಲ್ಲಿ ಪ್ರಕಟಗೊಂಡ 7 (ಏಳು) ದಿನಗಳ ಒಳಗಾಗಿ ಲಿಖಿತವಾಗಿ ತಮ್ಮ ವಿವರಣೆಯನ್ನು ಖುದ್ದಾಗಿ ಅಥವಾ ನಿಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಸಲ್ಲಿಸಲು ತಿಳಿಸಿದೆ. ತಪ್ಪಿದಲ್ಲಿ ನಿಮ್ಮ ಹೇಳಿಕೆ ಏನೂ ಇಲ್ಲವೆಂದು ತಿಳಿದು ಕಾನೂನು ರೀತ್ಯ ಮುಂದಿನ ಕ್ರಮ ಜರುಗಿಸಲಾಗುವುದು.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್
ಪಿ.ಆರ್. 1265 ಎಕ್ಸೈಜ್, ಬೆಳಗಾಂವ ಜಿಲ್ಲೆ, ಬೆಳಗಾಂವ.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಇವರ ಕಾರ್ಯಾಲಯ**

**ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಬಿ) ನ ರೀತ್ಯಾ ಕಾರಣ ಕೇಳಿ ನೋಟೀಸು**

**ನಂ. ಇಎಕ್ಸ್‌ಇ/ಸಿಓಎನ್/ಡಿಟಿಸಿಆರ್/820/2002-03**

**ವಿಷಯ:** ಮೊಕದ್ದಮೆಯಲ್ಲಿ ಇಲಾಖೆಗೆ ವಶಪಡಿಸಿಕೊಂಡ ಮದ್ಯ ಮತ್ತು ವಾಹನವನ್ನು ಏಕೆ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂಬ ಬಗ್ಗೆ.

**ಉಲ್ಲೇಖ:** ಅಬಕಾರಿ ಇನ್ಸ್‌ಪೆಕ್ಟರ್ ಇಐಬಿ ಬೆಳಗಾಂವ ಇವರ ಪ್ರಥಮ ವರ್ತಮಾನ ವರದಿ ಸಂ: 14:2002-03, ದಿನಾಂಕ: 4.5.2003.

ಅಬಕಾರಿ ಇನ್ಸ್‌ಸ್ಪೆಕ್ಟರ್ ಇಐಬಿ ಬೆಳಗಾಂವ ಇವರು ದಿನಾಂಕ: 4.5.2003 ರಂದು 3.30 ಪಿ.ಎಂ. ದಿಂದ 5.00 ಪಿ.ಎಂ. ದ ವರೆಗೆ ಬೆಳಗಾಂವ ಬೂತರಾಮನಟ್ಟಿ ರಾಷ್ಟ್ರೀಯ ಹೆದ್ದಾರಿ ನಂ. 4ರ ಎಡಬದಿಗೆ ಇರುವ ಪೆಟ್ರೋಲ್ ಬಂಕ್‌ನ ಎದುರಿಗೆ ರಹದಾರಿಯ ಮೇಲೆ ರಸ್ತೆ ಗಾವಲು ಮಾಡುತ್ತಿದ್ದಾಗ ಒಂದು ಕಂದು ಬಣ್ಣದ ಅಶೋಕಾ ಲೈಲ್ಯಾಂಡ್ ಟ್ರಕ್ ನಂ. ಎಂಹೆಚ್-12-6389 ರಲ್ಲಿ 395 ರಟ್ಟಿನ ಬಾಕ್ಸ್‌ಗಳಲ್ಲಿ 3439.080 ಬಿ.ಎಲ್. ಮದ್ಯವನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ ಸಿಕ್ಕ ಅಪರಾಧಕ್ಕಾಗಿ ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 10, 11, 12, 14 ಹಾಗೂ 38(ಎ) ರ ಪ್ರಕಾರ ಗುನ್ಹೆ ದಾಖಲು ಮಾಡಿ ವಾಹನ ಮತ್ತು ಮದ್ಯ ಜಪ್ತಿ ಮಾಡಿರುತ್ತಾರೆ. ಸದರಿ ಪ್ರಕರಣದ ಮುಟ್ಟುಗೋಲು ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿರುತ್ತಾರೆ.

ಮೇಲ್ಕಾಣಿಸಿದ ಮೊಕದ್ದಮೆಯಲ್ಲಿ ಸರಕಾರಕ್ಕೆ ಕರ ಕೊಡದೆ ಮದ್ಯವನ್ನು ಸಾಗಾಟ ಮಾಡುತ್ತಿರುವುದು ತುಂಬಾ ಗುರುತರವಾದ ಅಪರಾಧವಾಗಿದ್ದು ಈ ಕೃತ್ಯಕ್ಕೆ ಈ ಮೊಕದ್ದಮೆಯಲ್ಲಿ ಇಲಾಖೆಗೆ ವಶಪಡಿಸಿಕೊಂಡಿರುವ ವಾಹನ ಟ್ರಕ್ ಸಂ. ಎಂಹೆಚ್-12-6389 ಹಾಗೂ 3439.080 (395 ಬಾಕ್ಸ್) ಬಿಎಲ್ ಪೆಟ್ಟಿಗೆ ಮದ್ಯವನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಎ) ನ ರೀತ್ಯ ಏಕೆ? ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ತಿಳಿಸುತ್ತ, ಈ ವಿಚಾರದಲ್ಲಿ ನಿಮ್ಮಗಳ ಹೇಳಿಕೆ ಏನಾದರೂ ಇದ್ದಲ್ಲಿ ಈ ನೋಟೀಸು ಗೆಜೆಟ್ಟಿನಲ್ಲಿ ಪ್ರಕಟಗೊಂಡ 7 (ಏಳು) ದಿನಗಳ ಒಳಗಾಗಿ ಲಿಖಿತವಾಗಿ ತಮ್ಮ ವಿವರಣೆಯನ್ನು ಖುದ್ದಾಗಿ ಅಥವಾ ನಿಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಸಲ್ಲಿಸಲು ತಿಳಿಸಿದೆ. ತಪ್ಪಿದಲ್ಲಿ ನಿಮ್ಮ ಹೇಳಿಕೆ ಏನೂ ಇಲ್ಲವೆಂದು ತಿಳಿದು ಕಾನೂನು ರೀತ್ಯ ಮುಂದಿನ ಕ್ರಮ ಜರುಗಿಸಲಾಗುವುದು.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್
ಪಿ.ಆರ್. 1266 ಎಕ್ಸೈಜ್, ಬೆಳಗಾಂವ ಜಿಲ್ಲೆ, ಬೆಳಗಾಂವ.

**ಕರ್ನಾಟಕ ನೀರಾವರಿ ನಿಗಮ ನಿಯಮಿತ**

**ಸೂಪರಿಂಟೆಂಡಿಂಗ್ ಇಂಜಿನೀಯರರ ಕಛೇರಿ, ಮ.ಬ.ದ.ಕಾ.ನಿ. ವೃತ್ತ, ಧಾರವಾಡ**

**ತಿದ್ದುಪಡಿ**

**ವಿಷಯ:** ಅಳಗವಾಡಿ ಉಪವಿಭಾಗದ ವ್ಯಾಪ್ತಿಯಲ್ಲಿ ಬರುವ ನೀರು ಬಳಕೆದಾರರ ಸಹಕಾರ ಸಂಘಗಳ ಕ್ಷೇತ್ರಗಳಲ್ಲಿ ಬದಲಾವಣೆಯಾದ ಪ್ರಯುಕ್ತ ಮರು ತಿದ್ದುಪಡಿ ಪ್ರಕಟಣೆ ಮಾಡುವ ಕುರಿತು.

**ಉಲ್ಲೇಖ:** 1) ಸೂಪರಿಂಟೆಂಡಿಂಗ್ ಇಂಜಿನೀಯರ್ ಮಬದಕಾನಿ ವೃತ್ತ, ಧಾರವಾಡ ಇವರ ಕಚೇರಿಯ ಪತ್ರದ ನಂ. ಎಂಆರ್‌ಬಿಸಿ:ಡಿಬಿ-3: ಡಬ್ಲ್ಯೂಎಸ್:ಕೊಓ:2002-03: 2413, ದಿನಾಂಕ: 28.8.2002.

2) ಕಾ.ನಿ ಇಂಜಿನೀಯರ್ ಮಬದಕಾನಿ ವಿಭಾಗ ನಂ: 1 ನರಗುಂದ ಇವರ ಪತ್ರದ ಕ್ರಮಾಂಕ: 1748, ದಿನಾಂಕ: 22.10.2003.

**ಪ್ರಸ್ತಾವನೆ:**

ಉಲ್ಲೇಖ (1) ರಲ್ಲಿ ಮಬದಕಾನಿ ವೃತ್ತ, ಧಾರವಾಡ ಕಚೇರಿಯ ವ್ಯಾಪ್ತಿಯಲ್ಲಿ ಬರುವ ನೀರಾವರಿ ಕ್ಷೇತ್ರದಲ್ಲಿಯ 154 ಸಂಖ್ಯೆಗಳ ನೀರು ಬಳಕೆದಾರರ ಸಹಕಾರ ಸಂಘಗಳ ಗ್ರಾಮ:ಕಾಲುವೆ:ಕ್ಷೇತ್ರವನ್ನು ಒಳಗೊಂಡ ಅಧಿಸೂಚನೆಯನ್ನು ಹೊರಡಿಸಲಾಗಿತ್ತು. ಉಲ್ಲೇಖ (2)

